Photo by Pranlal K. Patel



ಬಹುಮಾನ
ಪಡೆದ ಶೀರ್ಷಿಕೆ

"ಹಾಲೂ ಮೊಸರೂ ಬೇಕಂತೆ!"

ಕಳಿಸಿದವರು :
ಎಚ್. ಲಕ್ಷ್ಮೀನಾರಾಯಣ, ಬಳ್ಳಾರಿ

## ಮಧುರ ಮಂದಹಾಸಗಳು





ನಿಮ್ಮ ಮಕ್ಕಳಿಗೆ ಪ್ರಿಯವಾದ
ಲಾಜೆನ್ಜು ಗಳು, ಪೆಪ್ಪರಮೆಂಟುಗಳು,
ಟಾಫೀಗಳು, ಚಾಕಲೇಟುಗಳು



**M. A. P. INDUSTRIES**
**TONDIARPET : MADRAS-21**




## ಗ್ರೈಪ್ ಸಿರಪ್ - ಐ. ಟಿ. ಎಲ್.

ನಿಮ್ಮ ಮುದ್ದು ಕಂದನ ಅಜೀರ್ಣ ವ್ಯಾಧಿಗಳನ್ನು
ತಡೆದು ಆರೋಗ್ಯ ಕಾಪಾಡುವ ಅಮೃತಪಾನ.

ತಯಾರಕರು :

**ದಿ ಮೈಸೂರು ಇಂಡಸ್ಟ್ರಿಯಲ್ ಅಂಡ್
ಟೆಸ್ಟಿಂಗ್ ಲ್ಯಾಬೋರಟರಿ, ಲಿ.,**

ಮಲ್ಲೇಶ್ವರಂ - ಬೆಂಗಳೂರು - 3

ಎಲ್ಲಾ ಪ್ರಮುಖ ವ್ಯಾಪಾರಿಗಳಲ್ಲೂ
ದೊರೆಯುತ್ತದೆ



ವ್ಯಾಪಾರದ ಗುರುತು 

**ಗ್ರೈಪ್ ಸಿರಪ್**

## ಈ ಸಂಚಿಕೆಯಲ್ಲಿ




### ಡೋಂಗರೇ ಬಾಲಾಮೃತ

•

ಇದು ಸೊರಗಿ ಕಡ್ಡಿಯಂತಾದ ಚಿಕ್ಕ ಮಕ್ಕಳಿಗೆ ಆರೋಗ್ಯವನ್ನೂ ಪುಷ್ಟಿಯನ್ನೂ ಬಲವನ್ನೂ ಕೊಡುತ್ತದೆ. ಇದರ ಸೇವನೆಯಿಂದ ಮಕ್ಕಳ ಹಲ್ಲುಗಳು ಕಷ್ಟವಿಲ್ಲದೆ ಹೊರಬೀಳಲು ಸಹಾಯವಾಗುತ್ತದೆ.


### ಸೂಚನೆ

ಬರುವ ತಿಂಗಳ 'ಚಂದಮಾಮ' ಸಂಚಿಕೆಗಳನ್ನು ಈ ತಿಂಗಳ ಕಡೇ ವಾರದಲ್ಲೇ ಪೋಸ್ಟ್ ಮಾಡಲಾಗುತ್ತದೆ. ಆ ಸಂಚಿಕೆಗಳು ತಕ್ಕ ಕಾಲದಲ್ಲಿ ನಿಮಗೆ ಸೇರದಿದ್ದರೆ, ನಿಮ್ಮೂರ ಪೋಸ್ಟಾಫೀಸಿನಲ್ಲಿ ನೀವು ಕಂಪ್ಲೇಂಟು ಕೊಟ್ಟು, ಆ ಸಂಗತಿ ನಮಗೂ ತಿಳಿಸಬೇಕಾಗಿ ಕೋರಲಾಗಿದೆ.

ಚಂದಮಾಮಾ ಪಬ್ಲಿಕೇಷನ್ಸ್,
ವಡಪಳನಿ.... ಮದ್ರಾಸ್-26.

# ಚಂದಮಾಮ

ಸಫಲಯಾತ್ರೆ ಎಂಬ ಸಣ್ಣ ಕಥೆಯನ್ನು ಈ ಸಂಚಿಕೆಯಲ್ಲಿ ನೀವು ಓದುವಿರಿ. ಇದು ಜಾತಕ ಕಥೆಗಳಲ್ಲಿ ಒಂದು. ಗೌತಮ ಬುದ್ಧನ ಪೂರ್ವಾವತಾರಕ್ಕೆ ಸಂಬಂಧಿಸಿದ ಕಥೆಗಳಿಗೆ ಜಾತಕ ಕಥೆಗಳೆಂದು ಹೇಳುವರು. ಇವು ಸುಮಾರು ಎರಡು ಸಾವಿರ ನಾನೂರು ವರ್ಷಗಳ ಹಿಂದಿನವು. ಆಗ ಪ್ರಪಂಚವು ಬುದ್ಧನನ್ನು ದೇವರಿಗಿಂತಲೂ ಹೆಚ್ಚೆಂದು ಭಾವಿಸುತ್ತಿತ್ತು. ಆ ಮಹಾನುಭಾವನು ದುಷ್ಟಶಿಕ್ಷಣಕ್ಕಾಗಿ ಶಿಷ್ಟರಕ್ಷಣೆಗಾಗಿ ಜನ್ಮ ತಾಳಿದನೆಂದು ನಂಬಿತ್ತು. ಆದುದರಿಂದಲೇ ಬುದ್ಧಾವತಾರವನ್ನು ದಶಾವತಾರಗಳಲ್ಲಿ ಒಂದಾಗಿ ಪರಿಗಣಿಸಲ್ಪಡುತ್ತಿದೆ. ಮಾನವನಿಗೆ ಮೊದಲು ಬೇಕಾದುದು ಮನೋನಿಗ್ರಹವೆಂದೂ, ಬಾಳಿನಲ್ಲಿ ದಯಾ ಧರ್ಮಗಳನ್ನು ಮೀರಿದುದು ಮತ್ತೊಂದಿಲ್ಲವೆಂದೂ, ಇವೆರಡೂ ಆರ್ಯ ಸತ್ಯಗಳೆಂದೂ ಬುದ್ಧ ಭಗವಾನನು ಬೋಧಿಸಿದನು. ಆ ಮಹಾತ್ಮನ ಸಂದೇಶಗಳೇ ಜಾತಕ ಕಥೆಗಳೆಂದು ಪ್ರಸಿದ್ಧವಾಯಿತು. ವಿಜ್ಞಾನದಾಯಕವಾದ ಈ ಕಥೆಗಳು ಭಾರತ ದೇಶದಲ್ಲೇ ಅಲ್ಲದೆ ಟಿಬೆಟ್, ಚೈನಾ, ಮುಂತಾದ ದೇಶದಲ್ಲೂ ಸಹ ಹರಡಿವೆ. ಈ ಅಪೂರ್ವವಾದ ಕಥೆಗಳನ್ನು ಪ್ರತಿ ತಿಂಗಳೂ ಚಂದಮಾಮದಲ್ಲಿ ಪ್ರಕಟಿಸುವೆವು.

ಸಂಪುಟ ೧೦ : ಏಪ್ರಿಲ್ ೧೯೫೩ : ಸಂಚಿಕೆ ೪

SANKAR




# ಇಬ್ಬರು ಭಕ್ತರು

ಭಕ್ತರಿಬ್ಬರು ಹಿಂದೊಮ್ಮೆ
ಪಂಡರೀಪುರ ಕ್ಷೇತ್ರಯಾತ್ರೆಗೆ
ಹೋಗಲು ಪರಿತಪಿಸಿದರು ಬಹುಕಾಲ
ಹಣಸಹ ಕೂಡಿಟ್ಟರು.

ಶುಭಸಮಯವೆಂದು ಇಬ್ಬರು
ಒಂದುದಿನ ಕೂಡಿಟ್ಟ
ಹಣವ ತೆಗೆದುಕೊಂಡು ಸಂತಸದಿ
ಯಾತ್ರೆಗೆಂದು ಹೊರಟರಾಪಯಣ
ಅವರಿಬ್ಬರು ಕಡು ಆಸೆಯಿಂ
ಕೋರಿ ದೀಕ್ಷೆಸಾಧಿಸಲು ನಡೆದರು.



ಅಲ್ಲೊಂದು ಕಡೆ ಅನಾಥ
ಅತಿದರಿದ್ರ ವೃದ್ಧನೊಬ್ಬ
ಬಾಧೆಯಿಂ ಕಡೆಯುಸಿರೆಳೆಯುತೆ
ಮಾರ್ಗದಂಚಿನಲಿ ಕಾಣಬಂದ.

ಅದನೋಡಿ ಮೊದಲ ಭಕ್ತನು
ಕಡುನೊಂದು ಕಂಗಾಲಾಗಿ
ದಿಕ್ಕುಯಾರಿಲ್ಲಿ? ಆರ್ತನೀತ
ಬಿಟ್ಟು ಹೋಗಲೆಂತು?' ಎಂದ.

ಆ ಮಾತಸುಕೇಳಿ ಮಿತ್ರನು
'ಒಳ್ಳೆಯವನೀನು, ಇವನಾರು?
ದಾರಿಯಲ್ಲಿ ಈ ಜಂಜಾಟವೇಕೆ?
ಮುಂದೆ ನಡೆಯಯ್ಯ' ಎಂದ.



ಮೊದಲ ಭಕ್ತನೊಪ್ಪಲಿಲ್ಲ
'ನೀನು ನಡೆ. ನನ್ನಿಂದಾಗದು
ಹಿಂದಾಗಿ ಬರುವೆನು' ಎಂದವನೆ
ಹೊರಡದೆ ನಿಂತನಲ್ಲೆ.

ಆ ಭಕ್ತ ಹೊರಟನಂತರ
ವೃದ್ಧನನ್ನು ಒಂದೆಡೆಗೊಯ್ದು
ಇದ್ದಹಣವ ವೆಚ್ಚ ಮಾಡಿ
ಔಷಧಿ ತಂದು, ಸೇವೆಸಲ್ಲಿಸಿದ.

ಕೆಲವು ದಿನಗಳಲ್ಲಿ ಗುಣಹೊಂದಿ
ಮುದುಕ ದೇವರೆಂದು ಭಕ್ತನ
ಕೊಂಡಾಡಿ ಹೊರಟ, ಹಣವಿಲ್ಲದೆ
ಭಕ್ತ ಹಿಂತಿರುಗಿ ಮನೆಸೇರಿದ.






'ಕಮಲಾಕರ'

ಎರಡನೇಯವ ಪಂಡರಿಪುರ
ಸೇರಿ ದೇವಾಲಯದಲ್ಲಿ
ಗೆಳೆಯನು ಮುಂದಾಗಿರುವುದ
ಕಂಡು ನಾಚಿಕೊಂಡ.

ಕೇಳೋಣವೆಂದಿರುವಲ್ಲಿ
ಮಾಯಾಮಿತ್ರನು ಅದೃಶ್ಯನಾದ.

ಮನೆಗೆ ಹಿಂತಿರುಗಿ
ಅಲ್ಲಿ ಗೆಳೆಯನಂಕಂಡು ಕೇಳಿದ
ಆತನು ನಾನಲ್ಲಿಗೆ ಬರಲಿಲ್ಲವೆನ್ನಲು
ಅದರ ರಹಸ್ಯವೇನೆಂಬುದರ್ಥವಾಯಿತು.

# ಮುಂಬದಿಯ ಚಿತ್ರ

ಗುರುಗಳಾದ ದ್ರೋಣಾಚಾರ್ಯರು ಕೌರವ ಪಾಂಡವರಿಗೆ ಸಕಲ ವಿದ್ಯೆಗಳನ್ನೂ ಕಲಿಸಿದರು. ಭೀಷ್ಮಮೊದಲಾದ ಹಿರಿಯರು ಒಂದಾನೊಂದು ಶುಭದಿನವನ್ನು ಗೊತ್ತುಮಾಡಿ ಆ ದಿನ ಕುರು ಕುಮಾರರ ವಿದ್ಯಾಪರೀಕ್ಷೆಯನ್ನು ಏರ್ಪಡಿಸಿದರು.

ರಾಜಪರಿವಾರದವರು ಮಾತ್ರವಲ್ಲದೆ ಪ್ರಜೆಗಳೂ ಈ ಪರೀಕ್ಷೆಗೆ ಕಿಕ್ಕಿರಿದಿದ್ದರು. ಯುದ್ಧ ವಿದ್ಯೆಯ ಪ್ರದರ್ಶನವು ಅತ್ಯದ್ಭುತವಾಯಿತು.

ಕುದುರೆಸವಾರಿ, ಕತ್ತಿಕಾಳಗ, ಗದಾಯುದ್ಧ, ಬಾಣದಗುರಿ ಇವೆಲ್ಲಾ ಬಹಳ ಸಂಭ್ರಮ ಮಾದುವು. ಗದಾಯುದ್ಧದಲ್ಲಿ ಭೀಮ ದುರ್ಯೋಧನರು ನಿಜವಾದ ಯುದ್ಧಕ್ಕೇ ಇಳಿದುಬಿಟ್ಟರು. ಭೀಷ್ಮ ದ್ರೋಣ ಮೊದಲಾದವರು ಅವರನ್ನು ಬಹುಪ್ರಯಾಸದಿಂದ ತಡೆಯಬೇಕಾಯಿತು.

ನಂತರ ಎಲ್ಲರೂ ಏಕಕಂಠವಾಗಿ ಹೊಗಳಿದ್ದು ಅರ್ಜುನನ ಬಿಲ್ಲುವಿದ್ಯೆಯನ್ನು! ಅರ್ಜುನನಿಗೆ ಸರಿಸಾಟಿಯಾದ ಬಿಲ್ಲುಗಾರರು ಯಾರೂ ಇಲ್ಲವೆಂದು ಎಲ್ಲರೂಕೂಗಿ ಜಯಘೋಷ ಮಾಡಿದರು.

ಇದನ್ನುಕೇಳಿ ನೋಟಕರ ಗುಂಪಿನಲ್ಲಿದ್ದ ಕರ್ಣನು ಮುಂದೆಬಂದನು; "ನನ್ನ ವಿದ್ಯೆಯನ್ನು ಪರೀಕ್ಷಿಸಿ ನಂತರ ಅರ್ಜುನನನ್ನು ಹೊಗಳಿರಿ" ಎಂದನು. 'ನಿನ್ನ ವಿದ್ಯೆಯನ್ನು ತೋರಿಸು' ಎಂದು ಭೀಷ್ಮರ ಆಜ್ಞೆಯಾಯಿತು.

ಒಡನೆ ಕರ್ಣನು ಅರ್ಜುನನು ತೋರಿಸಿದ ಪ್ರತಿ ವಿದ್ಯೆಯನ್ನು ತೋರಿಸಿದನು. ಅರ್ಜುನನಿಗಿಂತಲೂ ಹೆಚ್ಚಿನದನ್ನೆ ತೋರಿಸಿದನು. ಎಲ್ಲರೂ ಅವನನ್ನೂ ಬಾಯಿತುಂಬಾ ಹೊಗಳಿದರು.

ಇದರಿಂದ ಕರ್ಣನು ಹೆಮ್ಮೆಗೊಂಡು ಅರ್ಜುನನನ್ನೆ ತನ್ನೊಡನೆ ಯುದ್ಧಕ್ಕೆ ಕರೆದನು. ಅರ್ಜುನನು ಶಾಂತಭಾವದಿಂದಲೇ ಗುರುಗಳ ಮುಖ ನೋಡಿದನು.

ಆಗ ಭೀಷ್ಮ-ದ್ರೋಣ ಮೊದಲಾದವರು—"ಇದು ವಿದ್ಯಾಪ್ರದರ್ಶನವಷ್ಟೇ ಹೊರತು, ಯುದ್ಧರಂಗವಲ್ಲ. ನಮ್ಮಸಾರಥಿಯ ಸಾಕುಮಗನಾದ ನೀನು, ಅರ್ಜುನನನ್ನು ಯುದ್ಧಕ್ಕೆ ಕರೆಯುವುದೂ ಸರಿಯಲ್ಲ" ಎಂದರು.

ಕೂಡಲೇ ದುರ್ಯೋಧನನು ಮುಂದೆಬಂದು, "ನಾನು ಈ ಕರ್ಣನನ್ನು ಅಂಗದೇಶಕ್ಕೆ ರಾಜನನ್ನಾಗಿ ಮಾಡುತ್ತೇನೆ." ಎಂದು ಹೇಳಿ, ಮಂಗಳದ್ರವ್ಯಗಳನ್ನು ತರಿಸಿದನು. ಮತ್ತು ಕರ್ಣನಿಗೆ ಅಂಗದೇಶದ ಪಟ್ಟವನ್ನು ಕಟ್ಟಿ ಅಭಿಷೇಕಮಾಡಿದನು. ಅಂದಿನಿಂದ ಕರ್ಣ—ದುರ್ಯೋಧನರು ಪ್ರಾಣಮಿತ್ರರಾದರು.



# ಸಫಲಯಾತ್ರೆ

ಹಿಂದೆ ಬೋಧಿಸತ್ವನು ಕಾಶೀನಗರದ ವರ್ತಕ ಕುಟುಂಬವೊಂದರಲ್ಲಿ ಜನಿಸಿದ. ಆತನು ಐನೂರು ಗಾಡಿಗಳಲ್ಲಿ ಸರಕು ತುಂಬಿಕೊಂಡು ಹೋಗಿ ವ್ಯಾಪಾರಮಾಡುತ್ತಿದ್ದನು.

ಆ ಪಟ್ಟಣದಲ್ಲೇ ಮತ್ತೊಬ್ಬ ವರ್ತಕ ನಿದ್ದನು. ಆತ ಯೋಚನಾಪರನಲ್ಲ; ಆದರೆ ದುರುದ್ದೇಶಗಳಲ್ಲಿಮಾತ್ರ ಎತ್ತಿದಕೈ. ಒಂದು ದಿನ ಬೋಧಿಸತ್ವನು ಪ್ರಯಾಣಕ್ಕೆ ಗಾಡಿಗಳನ್ನು ಸಿದ್ಧಪಡಿಸಿಕೊಳ್ಳುತ್ತಿರುವುದನ್ನು ಕಂಡು ತಾನೂ ಸಹ ವ್ಯಾಪಾರಮಾಡಲು ಬರುವೆನೆಂದು ಸಿದ್ಧನಾದ ಎರಡನೇ ವರ್ತಕ!

ಆಗ ಬೋಧಿಸತ್ವನು ಆತನೊಂದಿಗೆ ಹೀಗೆಂದ: "ಮಿತ್ರನೇ, ನಿನ್ನ ಗಾಡಿಗಳೂ, ನನ್ನ ಗಾಡಿಗಳೂ ಒಂದೇಸಾರಿ ಹೊರಟರೆ ರಸ್ತೆ ಸಾಕಾಗದೆ ಕಷ್ಟವಾಗಬಹುದು. ಆದುದರಿಂದ ಒಬ್ಬನತರುವಾಯ ಒಬ್ಬರು ಹೋಗವುದು ಉಚಿತ. ಮೊದಲು ನೀನು ಪ್ರಯಾಣಮಾಡು, ಇಲ್ಲ ನಾನು ಹೊರಡುತ್ತೇನೆ. ನಿನಗೆ ಯಾವುದು ಸೌಕರ್ಯವೋ ಹೇಳು" ಎಂದ.

ಎರಡನೇ ವರ್ತಕ ಹೇಗೆಂದು ಯೋಚಿಸಿದ. "ಮೊದಲು ನಾನು ಹೋದಪಕ್ಷಕ್ಕೆ ನಮ್ಮ ಕಡೆಯವರಿಗೆ ಒಳ್ಳೊಳ್ಳೆ ಹಣ್ಣುಹಂಪಲು, ತರಕಾರಿ ಮುಂತಾದುವು ಸಿಗುವುದು. ದನಗಳಿಗೆ ಹುಲುಸಾದ ಹುಲ್ಲು ಸಿಗುತ್ತದೆ. ಸ್ವಚ್ಛವಾದ ತಿಳಿನೀರು ಸಿಗುತ್ತದೆ. ಯಾವ ದೇಶಕ್ಕೆ ಹೋದರೂ ನನ್ನ ಸರಕುಗಳಿಗೆ ನನ್ನಿಷ್ಟಬಂದ ಬೆಲೆ ಕೇಳಬಹುದು. ಆದುದರಿಂದ ಮೊದಲು ಹೊರಡುವುದೇ ಉಚಿತವೆಂದು ಕಾಣಿಸುವುದು"

ಅದೇ ವಿಚಾರವಾಗಿ ಬೋಧಿಸತ್ವನೂಸಹ ಯೋಚಿಸುತ್ತಿದ್ದ: 'ಒಬ್ಬರು ನಡೆದ ಹಾದಿಯಲ್ಲಿ ನಡೆಯುವುದೇ ಉತ್ತಮ ಮತ್ತು ಸುಲಭ. ಒಂದುಸಾರಿ ದನ ಮೇದ ಸ್ಥಳದಲ್ಲಿ ಹುಲ್ಲು ಬಹಳ ಹುಲುಸಾಗಿ ಬೆಳೆಯುತ್ತದೆ. ತರಕಾರಿಯ ವಿಷಯದಲ್ಲೂ ಅಷ್ಟೆ. ನೀರಿನ

ಎಚ್. ನಾರಾಯಣರಾವ್.



ಅನುಕೂಲವಿಲ್ಲದವರು ಮೊದಲು ಹೋದರೆ ನೀರಿಗಾಗಿ ಭಾವಿ ತೋಡುತ್ತಾರೆ. ಅವು ನಮಗೂ ಸಹ ಉಪಯೋಗವಾಗುವುದು. ಕಂಡ ಕಂಡ ಸ್ಥಳಕ್ಕೆ ಹೋಗಿ ವ್ಯಾಪಾರ ಮಾಡುವುದು ದುಸ್ತರವಾದ ವಿಷಯ. ಮೊದಲು ಹೋದವರು ಹೇಗಿದ್ದರೂ ದರಗಳು ನಿರ್ಣಯಿಸಿರುತ್ತಾರೆ. ಅದರಿಂದ ಆಮೇಲೆ ಹೋದವರಿಗೆ ಸಾಧಕ, ಬಾಧಕಗಳೂ ಅಷ್ಟೇನೂ ಇರುವುದಿಲ್ಲ' ಎಂದುಕೊಂಡು ತಾನು ಹಿಂದೆ ಹೋಗಲು ನಿರ್ಧರಿಸಿದ.

೬೦ ಯೋಜನೆಗಳ ದೂರದಲ್ಲಿದೆ ಅವರು ಹೋಗಬೇಕಾದಸ್ಥಳ. ಮಧ್ಯ ಒಂದು ಮರು ಭೂಮಿ. ತಮ್ಮ ಪ್ರಯಾಣಕ್ಕೆಬೇಕಾಗುವ ತಿಂಡಿಯನ್ನೂ ಪೀಪಾಯಿಗಳ ತುಂಬಾ ನೀರನ್ನೂ ಸಿದ್ಧಗೊಳಿಸಿದರು.

ಸಾಮಾನು ಸರಂಜಾಮುಗಳೊಂದಿಗೆ ಹೊರಟ ಎರಡನೇ ವರ್ತಕನು ಭೋದಿಸತ್ವನಿಗೆ ತಾನು ಮಕಮಲ್ ಟೋಪಿ ಹಾಕಿದೆನೆಂದು ಮನಸ್ಸಿನಲ್ಲಿ ಸಂತೋಷಪಡುತ್ತಿದ್ದ. ಆತ ಬಹಳ ದೂರಪ್ರಯಾಣಮಾಡಿ ಕೊನೆಗೆ ಆ ಬ್ರಹ್ಮಾಂಡವಾದ ಮರುಭೂಮಿಯನ್ನು ಸೇರಿದ. ಸ್ವಲ್ಪದೂರ ಹೋಗು ವಷ್ಟರಲ್ಲಿ ಆತನಿಗೆ ಅಪರೂಪವೂ ಅಪೂರ್ವವೂ ಆದ ರಥವೊಂದು ಎದುರಾಯಿತು. ಆ ರಥವನ್ನು ಸೊಗಸಾದ ನಾಲ್ಕು ಕುದುರೆಗಳು ಎಳೆಯುತ್ತಿದ್ದವು. ಗಾಡಿಯಲ್ಲಿ ರಾಜಕುಮಾರನೊಬ್ಬನು ಕುಳಿತಿದ್ದ. ಕತ್ತಿಕಠಾರಿಗಳನ್ನು ಹಿಡಿದಿದ್ದ. ಪರಿವಾರವು ಮುಂದೆನಡೆಯುತಿತ್ತು. ಆ ಜನರೆಲ್ಲಾ ಭಾರಿ ಮಳೆಯಲ್ಲಿ ಸಿಕ್ಕಿಕೊಂಡಂತೆಯೂ, ಗಾಡಿಯ ಚಕ್ರಗಳು ಕೆಸರಿನಲ್ಲಿ ಹೂತುಹೋದಂತೆಯೂ ಕಾಣಿಸುತಿತ್ತು.

ರಥದಲ್ಲಿದ್ದ ರಾಜಕುಮಾರನು ಗಾಡಿಯಲ್ಲಿ ಹೋಗುತ್ತಿದ್ದ ವರ್ತಕನನ್ನು ತಡೆದು ಹೀಗೆಂದ: "ಏನುಮಳೆಯಪ್ಪಾ. ಅದೋ ಆ ಅಡವಿದಾಟಿದರೆ ಸಾಕು ಎಲ್ಲಾ ನೀರುಮಯ. ನದಿನಾಡು ಒಂದಾದಂತಿದೆ. ಅಂತಹ ಪ್ರದೇಶಕ್ಕೆ ಹೋಗುವಾಗ ಈರೀತಿ ಕಷ್ಟಪಟ್ಟು ಪೀಪಾಯಿಗಳ ತುಂಬಾ ನೀರು ತುಂಬಿಕೊಂಡು ಹೋಗುತ್ತಿರುವುದು ಹಾಸ್ಯಾಸ್ಪದವಾಗಿದೆ". ಈಪ್ರಕಾರ ನಗುತ್ತಾ ಅವನು ಹೇಳಿದ್ದು ನಿಜವೆಂತಲೇ

ನಂಬಿ ದೂರಾಲೋಚನೆಯಿಲ್ಲದ ವರ್ತಕ ಪೀಪಾಯಿಗಳಲ್ಲಿದ್ದ ನೀರೆಲ್ಲವನ್ನೂ ಕೆಳಗೆಸುರಿದು, ಮುಂದಕ್ಕೆ ನಡದ. ಎಷ್ಟುದೂರ ಹೋದರೂ ಆ ಅಡವಿ ಮುಗಿಯುವಂತೆಯೇ ಇರಲಿಲ್ಲ. ವರ್ತಕನ ಪರಿವಾರಕ್ಕೆ ಬಾಯಾರಿಕೆ ಆಯಿತು. ಕುಡಿಯಲು ಒಂದಿಶ್ಟಾದರೂ ನೀರು ಇಲ್ಲ. ಗಂಟಲು ಒಣಗಿ, ಆ ಮರುಭೂಮಿಯಲ್ಲಿ ಅವರು ಒಬ್ಬೊಬ್ಬರಾಗಿ ಸಾಯುಹತ್ತಿದರು. ಹಾಗೆ ಮರಣಪಡ ಜನರನ್ನು ರಾಜಕುಮಾರ ಮತ್ತು ಅತನ ಪರಿವಾರದರೂಪದಲ್ಲಿ ಬಂದ ಭೂತಗಳೂ ಆಹಾರವಾಗಿ ಉಪಯೋಗಿಸಿಕೊಂಡವು. ಕ್ರಮೇಣ ಮನುಷ್ಯರಂತೆ ಆ ಮೂಕಪ್ರಾಣಿಗಳೂ ಸಹ ಸತ್ತುಹೋದವು. ಅವುಗಳೂಸಹ ಆ ಭೂತಗಳ ಬಾಯಿಗೆ ಬಲಿಯಾದವು. ಗಾಡಿಗಳಲ್ಲಿದ್ದ ಸಾಮಾನುಗಳು ಮಾತ್ರ ಹಾಗೇ ಇದ್ದುಬಿಟ್ಟವು.

ಕೆಲದಿನಗಳತರುವಾಯ ಬೋಧಿಸತ್ವನು ಸಹ ಆ ದಾರಿಯಲ್ಲೇ ಹೊರಟ. ಆತನೂ ಸಹ ತಿಂಡಿಪದಾರ್ಥಗಳನ್ನೂ ಪೀಪಾಯಿಗಳಲ್ಲಿನೀರನ್ನೂ ತುಂಬಿಸಿಕೊಂಡು ಪ್ರಯಾಣಬೆಳಿಸಿದ.

ಗಾಡಿ ಮರುಭೂಮಿಯಹತ್ತಿರ ಬಂದಕೂಡಲೇ ಬೋಧಿಸತ್ವನು ತನ್ನ ಪರಿವಾರದೊಂದಿಗೆ "ನನಗೆ ಹೇಳದೆ ಕೇಳದೆ ಯಾರೂ ಒಂದು ತೊಟ್ಟಾದರೂ ನೀರು ಕುಡಿಯಕೂಡದು. ಇಲ್ಲಿರುವುದೆಲ್ಲಾ ವಿಷವೃಕ್ಷಗಳು. ನನ್ನ ಕೇಳದೆ ಯಾರೂ ಒಂದು ಎಲೆಯನ್ನುಸಹ ಕೀಳಕೂಡದು" ಎಂದು ಎಚ್ಚರಿಸಿದ.



ಮರುಭೂಮಿಯಮಧ್ಯ ಹೋದಕೂಡಲೇ ಹಿಂದಿನಂತೆಯೇ ರಥದಲ್ಲಿ ರಾಜಕುಮಾರ ತನ್ನ ಪರಿವಾರಸಮೇತ ಕಾಣಿಸಿಕೊಂಡ. ಅವರ ವೇಷ ಭೂಷಣಗಳನ್ನು ನೋಡಿದಕೂಡಲೇ ಬೋಧಿಸತ್ವನು ನಿಜವಿಷಯವನ್ನು ಗ್ರಹಿಸಿದ. ಹಿಂದಿನಂತೆಯೇ ರಾಜಕುಮಾರನು ನೀರಿನ ಪೀಪಾಯಿಗಳನ್ನು ಕಂಡು ಅಪಹಾಸ್ಯಮಾಡಿದ. ಆಗ ಬೋಧಿಸತ್ವನು "ಮೊದಲು ಹೊಸನೀರು ಕಾಣಿಸಲಿ; ತುಂಬಿಟ್ಟಿರುವ ನೀರು ಚೆಲ್ಲೋದು ಎಷ್ಟರಕೆಲಸ" ಅಂತ ಹೇಳಿದ.

ಅದನ್ನು ಕೇಳಿ ರಾಜಕುಮಾರ ಮರು ಮಾತನಾಡದೆ ಮೆಲ್ಲನೆ ಜಾರಿಕೊಂಡ. ಆ ರಾಜಕುಮಾರನ ಮಾತುಗಳಲ್ಲಿ ಕೆಲವರಿಗೆ

ನಂಬಿಕೆಯುಂಟಾಗಿ ನೀರು ಸುರಿಸಲು ಸಿದ್ಧರಾದರು. ಆಗ ಬೋಧಿಸತ್ವನು "ಮರುಭೂಮಿಯಲ್ಲಿ ನೀರು ಸಿಗುವುದೆಂದು ನೀವು ಎಂದಾದರೂ ಕೇಳಿರುವಿರಾ? ಮಳೆ ಬರುವ ಸೂಚನೆಗಳು ನಿಮ್ಮಲ್ಲೊಬ್ಬರಿಗಾದರೂ ಕಾಣಿಸಿತೇ? ಕಣ್ಣಿಗೆ ಕಾಣುವದೂರದಲ್ಲಿ ಒಂದಾದರೂ ಮೋಡ ಕಾಣಿಸಿತೇ? ಮಿಂಚು ಹೊಳೆಯಿತೇ? ಆತನು ಹೇಳಿದಂತೆ ಈ ಪ್ರದೇಶದಲ್ಲಿ ಮಳೆ ಬಿದ್ದಿದೆ ಎಂದು ಊಹಿಸುವ. ಹಾಗಾದರೆ ಗುಡುಗು ಬಹಳದೂರ ಕೇಳಿಸುವುದಷ್ಟೆ. ನಿಮಗೆ ಗುಡುಗಿನ ಶಬ್ದವಾದರೂ ಕೇಳಿಸಿತೇನು?" ಎಂದು ಪ್ರಶ್ನೆಹಾಕಲು, ಅವರು ಉತ್ತರ ಕೊಡಲಾರದೆ ಸುಸ್ತಾದರು.

ಆಗ ಬೋಧಿಸತ್ವನೆಂದ "ಗೆಳೆಯರೇ, ಅವರು ನಿಜವಾದ ಮಾನವರಲ್ಲ. ಮಾನವಾಕೃತಿತಾಳಿದ ಭೂತಗಳು. ಅವರ ಮಾತು ಕೇಳಿ ನೀರು ಚೆಲ್ಲಿದ್ದರೆ ನಿಮಗೆ ಬಾಯಾರಿಕೆ ಆದಾಗ ಒಂದುಗುಟುಕು ನೀರಾದರೂ ಸಿಕ್ಕುತ್ತಿರಲಿಲ್ಲ. ಬಾಯಾರಿಕೆಯಿಂದ ನಾವು ಸತ್ತು ಹೋದರೆ ನಮ್ಮನ್ನು ತಿಂದುಬಿಡುವ ಸಂಚಿಕೆ ಹೂಡಿತ್ತು ಆ ಭೂತಗಳು. ಆದುದರಿಂದ ಒಂದು ತೊಟ್ಟಾದರೂ ನೀರು ಚೆಲ್ಲಬೇಡಿ".

ಬೋಧಿಸತ್ವನೂ ಆತನ ಪರಿವಾರವೂ ತುಸ ದೂರ ಹೋಗಲು, ಮುಂದೆ ನಡೆದಿದ್ದ ವರ್ತಕನ ಐನೂರು ಗಾಡಿಗಳೂ, ಅವುಗಳತುಂಬಾ ಸಾಮಾನುಗಳೂ ಕಾಣಿಸಿದವು. ಅವುಗಳ ಹತ್ತಿರದಲ್ಲೇ ಅಸ್ಥಿಪಂಜರಗಳು ರಾಶಿರಾಶಿಯಾಗಿ ಬಿದ್ದಿವೆ.

ಇವನ್ನು ಕಂಡು ಎಲ್ಲರೂ ಆಶ್ಚರ್ಯಚಕಿತರಾದರು. ಆಗ ಬೋಧಿಸತ್ವನು "ದೂರಾಲೋಚನೆಯಿಲ್ಲದೆ ನೀರು ಸುರಿದುಬಿಟ್ಟದ್ದರ ಫಲ ಇದು. ನೋಡಿ ಆ ವರ್ತಕನ ಗತಿ ಏನಾಯಿತೋ" ಎಂದು ಅವರಿಗೆ ನಡೆದ ವಿಷಯ ತಿಳಿಸಿದ.

ಬೆಳಗಾದಕೂಡಲೇ ಆತನು ಆ ಗಾಡಿಗಳನ್ನೂ ಸಹ ತೆಗೆದುಕೊಂಡು ತಾನು ಸೇರಬೇಕೆಂದಿದ್ದ ಸ್ಥಳವನ್ನು ಸೇರಿಕೊಂಡ. ತಾನು ತಂದಿದ್ದ ಸರಕುಗಳನ್ನೆಲ್ಲಾ ಮಾರಿ ಅಪಾರ ಲಾಭಗಳಿಸಿ, ಪರಿವಾರಸಮೇತ ತನ್ನ ನಗರವನ್ನು ಸೇರಿ, ಸುಖವಾಗಿ ಕಾಲಕಳೆಯುತ್ತಿದ್ದ.






## 5

ಆದರೆ ಚಿತ್ರಭಾನುವಿಗೆ ದಿನಾ ಒಂದೊಂದು ಕನಸು ಬೀಳಲು ಪ್ರಾರಂಭವಾಯಿತು. ಆ ಕನಸಿನಲ್ಲಿ "ಅಪ್ಪಾ, ಚಿತ್ರಭಾನು, ನನ್ನ ಆತ್ಮಕ್ಕೆ ಶಾಂತಿಯನ್ನುಂಟುಮಾಡಲಾರೆಯಾ? ಚಿತ್ರಭಾನು, ನನ್ನ ಆತ್ಮಕ್ಕೆ ಶಾಂತಿಯನ್ನುಂಟು ಮಾಡಲಾರೆಯಾ?" ಎಂದು ಯಾರೋ ತುಂಬಾ ದೈನ್ಯತೆಯಿಂದ ಕೇಳುತ್ತಿರುವಂತೆ ಕನಸು ಕಂಡನು.

ಹುಡುಗನಿಗೆ ಇದರ ಅರ್ಥ ತಿಳಿಯಲಿಲ್ಲ. ಪ್ರತಿದಿನಾ ಆ ಕನಸಿನಲ್ಲಿ ಕಾಣುವ ವ್ಯಕ್ತಿಯು ಮತ್ತೂ ದೈನ್ಯತೆಯಿಂದ ಕೇಳಿಕೊಳ್ಳುತ್ತಿರುವಂತೆ ಕಾಣುತ್ತಿತ್ತು.

ಇದೊಂದು ಕನಸುತಾನೇ ಎಂದು ಮೊದಮೊದಲು ಉದಾಸೀನ ವಹಿಸಿದ ಚಿತ್ರಭಾನು. ಆದರೆ ದಿನಂಪ್ರತಿ ಅದೇ ಕನಸು ಬೀಳುತ್ತಿದ್ದುದರಿಂದ ಆ ಬಾಲಕನಿಗೆ ಇದೊಂದು ಧರ್ಮಸಂಕಟವಾಗಿ ತೋರಿತು.

ಏನು ಮಾಡಲೂ ತೋರದೆ ಒಂದು ದಿನ ಈ ವಿಷಯವನ್ನು ಗುರುಗಳಿಗೆ ಹೇಳಿ ಇದರಲ್ಲೇನಾದರೂ ರಹಸ್ಯವಿದೆಯೇ ಎಂದು ಕೇಳಿದ.

ಅದಕ್ಕೆ ಮಿತ್ರಾನಂದನು "ಇಲ್ಲದೇನು ಮಗು. ಇಂತಹ ಕನಸು ಬೀಳುವುದರಲ್ಲಿ ಎಷ್ಟೋ ಗೂಢಾರ್ಥಗಳಿರುತ್ತವೆ. ಲಾಲಿಸು" ಎಂದು ಈ ರೀತಿ ಹೇಳಲು ಪ್ರಾರಂಭಿಸಿದ.

"ದೇವರಾಜನಾದ ಇಂದ್ರನ ಸಭೆಯಲ್ಲಿ ಒಬ್ಬಾನೊಬ್ಬ ಗಂಧರ್ವ ನಿದ್ದ, ಆತನಿಗೆ ಇಬ್ಬರು ಮಡದಿಯರು. ಹಿರಿಯಾಕೆಗೆ ಒಬ್ಬ ಕುಮಾರನೂ, ಕಿರಿಯಾಕೆಗೆ ಒಬ್ಬ ಮಗನೂ ಇದ್ದರು. ದೇವೇಂದ್ರನ ಸಭೆಯಲ್ಲಿ ಆ ಗಂಧರ್ವ



ಉನ್ನತೋದ್ಯೋಗಿ. ಈ ಕೆಲಸದ ಅವಧಿ ಮುಗಿದ ಕೂಡಲೇ ಆತನ ಸಂತತಿ ಆ ಪದವಿಯನ್ನು ಹೊಂದಬಹುದು. ಸಂತತಿ ಇಲ್ಲದಿದ್ದ ಪಕ್ಷಕ್ಕೆ ಆತನೇ ಮತ್ತೆ ಇಪ್ಪತ್ತು ವರ್ಷ ಆ ಕೆಲಸವನ್ನು ನೋಡಿಕೊಳ್ಳಬಹುದು. ಇದು ಆ ಉದ್ಯೋಗದ ಪದ್ಧತಿ.

ಆ ಗಂಧರ್ವನ ಉದ್ಯೋಗದಕಾಲ ಪೂರ್ತಿಯಾಯಿತು. ಆ ಕೆಲಸ ಹಿರಿಯ ಮಗನಿಗೆ ಬರಬೇಕಾದುದು ನ್ಯಾಯಸಮ್ಮತ. ಆದರೆ ಅದನ್ನು ತಪ್ಪಿಸಿ ತನ್ನ ಮಗನಿಗೆ ಆ ಪದವಿ ಕೊಡಿಸಬೇಕೆಂದು ಕಿರಿಯಾಕೆಯ ಹಂಬಲ.

ಕಿರಿಯಾಕೆ ಗಡುಸುಸ್ವಭಾವದವಳು. ಗಂಡನನ್ನು ತೀವ್ರವಾಗಿ ಆಕರ್ಷಿಸುವ ಚತುರಳು. ಅಷ್ಟೇ ಅಲ್ಲದೆ ಹಿರಿಯಾಕೆಯ ಮಗ ತುಂಬಾ ಸಾಧುಸ್ವಭಾವದವನು. ಆತನಿಗೆ ತನ್ನ ತಾಯಿ ಎಂದರೆ ಎಷ್ಟುಪ್ರೀತಿಯೋ ಅಷ್ಟೇಪ್ರೀತಿ ಚಿಕ್ಕಮ್ಮನಲ್ಲೂ.

ಈ ಗುಟ್ಟು ತಿಳಿದ ಕಿರಿಯಾಕೆ ಒಂದುದಿನ ಸವತಿಯ ಮಗನನ್ನು ಹತ್ತಿರಕ್ಕೆ ಬರಮಾಡಿಕೊಂಡು "ಮಗೂ, ನಾನೊಂದು ನೇಮವನ್ನು ಮಾಡಬೇಕೆಂದು ಸಂಕಲ್ಪಿಸಿದೇನೆ. ಆ ವ್ರತಕ್ಕೆ ದೇವತೆಗಳೆಲ್ಲರನ್ನು ಆಹ್ವಾನಿಸಬೇಕು. ಎಲ್ಲ ಜಾತಿಗಳ ಪುಷ್ಪಗಳನ್ನು ಈ ನೇಮಕ್ಕೆ ಉಪಯೋಗಿಸಬೇಕಾಗುವುದು. ಈಗ ಒಂದು ನೀಲಿರೋಜಾ ಹೂಗಳನ್ನು ಹೊರತು ಮಿಕ್ಕೆಲ್ಲ ವಿಧವಾದ ಪುಷ್ಪಗಳು ದೊರಕಿವೆ. ಆದುದರಿಂದ ವ್ರತ ನಿಲ್ಲಿಸಬೇಕಾಗಿ ಬಂತು. ಹೇಗಾದರೂ ಆ ನೀಲಿರೋಜಾ ಹೂಗಳನ್ನು ತಂದುಕೊಟ್ಟು, ನನ್ನ ವ್ರತವನ್ನು ನಡೆಸಿಕೊಡಬೇಕಾದ ಬಾಧ್ಯತೆ ನಿನ್ನದು. ಹೋಗು, ಈಗಲೇ ಹೋಗು. ಅಕ್ಕನಿಗೆ ನಾನು ಹೇಳುವೆನು" ಎಂದು ಹೇಳಿ ಅವನನ್ನು ಕಳುಹಿಸಿಬಿಟ್ಟಳು.

ಅಂದು ಎಷ್ಟು ಹೊತ್ತಾದರೂ ಮಗನು ಬರದಿರುವುದನ್ನು ಕಂಡು, ಅವನ ತಾಯಿ ಕಂಗೆಟ್ಟು ಅಲ್ಲಿ ಇಲ್ಲಿ ಹುಡುಕಲಾರಂಭಿಸಿದಳು. ಕಿರಿಯಾಕೆ ಇದನ್ನು ನೋಡಿ "ಅಕ್ಕಾ, ಮಗನಿಗಾಗಿ ನೀನೇನೂ ಭಯಪಡಬೇಕಾಗಿಲ್ಲ. 'ಸ್ನೇಹಿತರೊಂದಿಗೆ ಹೋಗಿ ವಿಚಿತ್ರವಾದ ಪುಷ್ಪಗಳನ್ನು ತರುತ್ತೇನೆ' ಎಂದು ತರಾತುರಿಯಲ್ಲಿ ಭೂಲೋಕಕ್ಕೆ ಹೋದ" ಎಂದು ನಂಬಿಕೆ ಹುಟ್ಟುವಂತೆ ಹೇಳಿದಳು. ನಿಜಕಾ

ರಣತಿಳಿಯದಿದ್ದುದರಿಂದ ಹಿರಿಯಾಕೆಗೆ ದುಗುಡಕಡಿಮೆ ಆಯಿತು.

ಇಷ್ಟರಲ್ಲಿ ಗಂಧರ್ವನ ಕೆಲಸಕ್ಕೆ ಅರ್ಹನಾದವನನ್ನು ನೇಮಿಸುವದಿನ ಬಂತು. ಆತನ ಹಿರಿಯಮಗನು ಅಲ್ಲಿ ಇಲ್ಲದಿದ್ದುದರಿಂದ ಅರ್ಹತೆಯುಳ್ಳ ತನ್ನ ಮಗನನ್ನು ಕಳುಹಿಸಿದಳು ಕಿರಿಯಾಕೆ. ಪದ್ಧತಿಪ್ರಕಾರ ಆ ಕೆಲಸ ಗಂಧರ್ವನ ಆ ಮಗನಿಗೇ ಲಭಿಸಿತು. ಆಕೆ ಆನಂದ ಗೊಂಡಳು.

ಈ ಸುಸಮಯದಲ್ಲಿ ತನ್ನ ಮಗನು ಇಲ್ಲವಲ್ಲಾ ಎಂದು ಹಿರಿಯಾಕೆಯ ಮನಸ್ಸು ಚಿಂತೆಗೊಂಡಲ್ಲಿ ಆಶ್ಚರ್ಯವಾದರೂ ಏನಿದೆ? ಇದರಲ್ಲಿ ಏನೋ ಮೋಸವಿರಬೇಕೆಂದು ಆಕೆಯ ಬುದ್ಧಿಗೆ ಹೊಳೆಯಿತು. ಕೂಡಲೇ ತನ್ನ ಮಗನ ಪರಿಸ್ಥಿತಿಯನ್ನು ತಿಳಿದುಕೊಳ್ಳಲು ದಿವ್ಯದೃಷ್ಟಿಯಿಂದ ನೋಡಿದಳು.

ಆ ಹುಡುಗ ನೀಲೀರೋಜಾಗಾಗಿ ಸ್ವರ್ಗವೆಲ್ಲಾ ಸುತ್ತಿದ. ಎಷ್ಟು ಸುತ್ತಿದರೂ ಸಿಗದಿರಲು ಪಾತಾಳಕ್ಕೆ ಹೋದ. ಅಲ್ಲೂ ಸಿಕ್ಕಲಿಲ್ಲ. ಒಂದಾದಮೇಲೊಂದು ಎಲ್ಲ ಲೋಕಳಲ್ಲಿ ಹುಡುಕಾಡಿದ. ಎಲ್ಲೂ ಲಭಿಸಲಿಲ್ಲ ಆ ಪುಷ್ಪಗಳು. ಭೂಲೋಕದಲ್ಲಿ ಸಿಕ್ಕಬಹುದೆಂದು ಯಾರೋ ಹೇಳಿದರು.

ಭೂಲೋಕವನ್ನು ಸೇರಿ ಅಲ್ಲಿದ್ದ ಎಲ್ಲ ತೋಟ, ಉದ್ಯಾನವನಗಳಲ್ಲಿ ಹುಡುಕಿದ್ದಾಯಿತು. ನೀಲಿರೋಜಾ ಒಂದು ಬಿಟ್ಟು ಮತ್ತೆಲ್ಲ ಜಾತಿಯ ಪುಷ್ಪಗಳು ಕಾಣಿಸಿದವು. ಆದರೂ ಚಿಕ್ಕಮ್ಮನ ನೇಮಕ್ಕೆ ಭಂಗವುಂಟಾ




ಗುವುದಲ್ಲಾ ಎಂದು ಚಿಂತಿಸಿ, ಬೇಸರಿಕೆ ವಿರಾಮ ಗಳಿನ್ನವೆ ಹುಡುಕುತ್ತಲೇ ಇದ್ದ.

ಹಿರಿಯಾಕೆಗೆ ಸತ್ಯಾಂಶ ತಿಳಿದು ಸವತಿಯ ಮೇಲೆ ರೊಚ್ಚಿಗೆದ್ದಳು. "ಎಲೆ, ದುರ್ಮಾರ್ಗಳೇ, ನಿನ್ನ ಕಂದನಿಗೂ ನನಗೂ ಅಗಲಿಕೆಯನ್ನುಂಟುಮಾಡಿ ನಾನಾರೀತಿಯ ಕಷ್ಟಕ್ಕೆ ಗುರಿಮಾಡಿದೆ. ನಿನಗೂ ನಿನ್ನ ಮಗನಿಗೂ ಅದೇ ರೀತಿ ಅಗಲಿಕೆಯುಂಟಾಗಿ ದುಃಖಪಡುವೆಯಂತೆ. ನನ್ನ ಮಗನನ್ನು ಯಾವ ಲೋಕಕ್ಕೆ ಕಳುಹಿಸಿದೆಯೋ ಆ ಭೂಲೋಕದೊಂದಿಗೆ ನಿನಗೆ ಸಂಬಂಭವೇರ್ಪಡುತ್ತದೆ. ಒಬ್ಬಾನೊಬ್ಬ ರಾಜ ನಿನ್ನನ್ನು ಮದುವೆಯಾಗುವನು. ನಿನ್ನ ಮಗ ಅಲ್ಲಿಯೂ ನಿನ್ನ ಪುತ್ರನಾಗಿ ಜನಿಸುವನು. ಸೃಷ್ಟಿಯಲ್ಲಿಲ್ಲದ ನೀಲೀರೋಜಾ ಹೂವಿನ ನೆಪದಿಂದ ತಾಯಿಮಕ್ಕಳಿಗೆ ಹೇಗೆ



ಅಗಲಿಕೆಯನ್ನುಂಟುಮಾಡಿದೆಯೋ ಹಾಗೇ ಕಂಡು ಕೇಳದ ನೆಪದಿಂದ ನಿಮ್ಮಿಬ್ಬರಿಗೂ ಅಗಲಿಕೆಯುಂಟಾಗುವುದು. ಈರೀತಿ ನೀನು ಕಷ್ಟಪಟ್ಟುತೀರಬೇಕು" ಎಂದು ಶಾಪವಿತ್ತು, ಮಗನನ್ನು ಹುಡುಕಿಕೊಂಡುಬರಲು ಕೂಡಲೇ ತನ್ನ ಸಖಿಯನ್ನು ಭೂಲೋಕಕ್ಕೆ ಕಳುಹಿಸಿದಳು. ಅಕ್ಕ ಕೊಟ್ಟ ಶಾಪ ಲಭಿಸುವುದೆಂದು ತಿಳಿದಿತ್ತು ಕಿರಿಯಾಕೆಗೆ. ಕೂಡಲೇ ಸವತಿಯ ಪಾದಗಳಮೇಲೆ ಬಿದ್ದು ತನ್ನನ್ನು ಕ್ಷಮಿಸಿದ ಹೊರತು ಅಲ್ಲಿಂದ ಏಳಲಾರೆನೆಂದಳು. ಕೋಮಲಸ್ವಭಾವದವಳಾದ ಹಿರಿಯಾಕೆ ಮರುಕಗೊಂಡು ಶಾಪವಿಮುಕ್ತಿಯ ಮಾರ್ಗ ಹೇಳಿ ಹೊರಟುಹೋದಳು.

ಆಗ ಅಲ್ಲಿಗೆ ಬಂದ ಗಂಧರ್ವನು ಎಲ್ಲ ವಿಷಯಗಳನ್ನೂ ಗ್ರಹಿಸಿದ. 'ನಡೆದುಹೋದುದಕ್ಕೆ ಚಿಂತಿಸಿ ಫಲವಿಲ್ಲ. ಆದರೆ ಅವಸರ ಕಂಡು ಬಂದಾಗಲೆಲ್ಲಾ ನಾನು ನಿನ್ನನ್ನು ನೋಡಿಕೊಳ್ಳುತ್ತಿರುತ್ತೇನೆ ಬಿಡು' ಎಂದು ಪರಿಪರಿ ವಿಧದಲ್ಲಿ ಕಿರಿಯಾಕೆಗೆ ಧೈರ್ಯ ಹೇಳಿದ.

ಅಷ್ಟರಲ್ಲಿ ಶಾಪಹೊಂದಿದ ಕಿರಿಯಾಕೆಗೆ ಸ್ವರ್ಗಲೋಕದ ವಿಷಯಗಳೆಲ್ಲಾ ಮರೆತು ಹೋದುವು.

ಆಕೆ ಅದೃಶ್ಯಳಾದಳು. ಆಕೆಯ ಮಗನ ವಿಷಯವೂ ಅಷ್ಟೆ. ಆತನೂ ಅದೃಶ್ಯನಾದ. ಸ್ವರ್ಗಲೋಕದಲ್ಲಿ ಅದೃಶ್ಯಳಾದ ಆ ಗಂಧರ್ವಿಣಿ ಮಾನವಳಾಗಿ ಭೂಲೋಕದಲ್ಲಿ ಒಂದು ಉದ್ಯಾನ ವನವನ್ನು ಸೇರಿಕೊಂಡಳು.

ಆಗ ಗಂಧರ್ವನು ತನ್ನ ಕಂಠ ಹಾರದಿಂದ ಹತ್ತು ಮುತ್ತುಗಳನ್ನು ತೆಗೆದು, ಆ ಹತ್ತು ಮುತ್ತುಗಳನ್ನೂ ಹತ್ತು ಪರಿಚಾರಿಕೆಯರಾಗಿ ಬದಲಾಯಿಸಿ, ಆ ಗಂಧರ್ವಿಣಿ ಸೇರಿಕೊಂಡ ಉದ್ಯಾನವನಕ್ಕೆ ಕಳುಹಿಸಿದ. ಅವರೊಂದಿಗೆ ಒಂದು ವೀಣೆಯನ್ನೂ ಕೊಟ್ಟು ಕಳುಹಿಸಿದ.

ಗಂಧರ್ವಿಣಿ ಸೇರಿಕೊಂಡ ಆ ಉದ್ಯಾನ ವನವು ಭಲ್ಲಾಣ ರಾಜ್ಯದ ಅಧಿಪತಿಯಾದ ಪ್ರಮೋದ ಮಹಾರಾಜನದು.

ಪ್ರಮೋದನಿಗೆ ಮದುವೆಯ ಪ್ರಸ್ತಾಪವೆತ್ತಿದರೂ ಸಹ ಕೋಪ. ಯಾರು ಹೇಳಿದರೂ ಕೇಳಲಿಲ್ಲ. ಆ ರಾಜ್ಯದ ಹಿರಿಯರೆಲ್ಲರೂ ನನ್ನ ಹತ್ತಿರ ಬಂದು ಯಾವುದಾದರೊಂದು ಉಪಾಯ ಹೇಳುವಂತೆ ಕೇಳಿದರು. ಅವರಿಗೆ ನಾನು ಕೆಲವು ಮಂತ್ರ ಫಲಗಳನ್ನು ಕೊಟ್ಟು ಕಳುಹಿಸಿದೆ. ಅದನ್ನು ತೆಗೆದುಕೊಂಡು ಹೋಗಿ

ರಾಜನಿಗೆ ತಿಳಿಯದಂತೆ ಉಪಾಹಾರ ದಲ್ಲಿ ಕೊಡಲು ಅದನ್ನು ಆತನು ಭುಜಿಸಿದನು.

ರಾಜ ಆ ಉಪಾಹಾರವನ್ನು ಸ್ವೀಕರಿಸಿದ ದಿನ ಗಂಧರ್ವಿಣಿ ಆ ಉದ್ಯಾನವನ್ನು ಸೇರಿದ ದಿನ ಒಂದೇ ಆಯಿತು.

ಅಂದು ರಾತ್ರಿ ಗಂಧರ್ವಿಣಿ ಬಾರಿಸುತ್ತಿದ್ದ ವೀಣಾವಾದವು ಪ್ರಮೋದನ ಕಿವಿಗೆಬಿತ್ತು. ಆ ಮಂಜಳಗಾನಕೇಳಿದ ಕೂಡಲೇ ಆತನು ತಟಕ್ಕನೆ ಎದ್ದು ಉದ್ಯಾನ ವನವನ್ನು ಸೇರಿಕೊಂಡ. ಆಕೆಯ ಅಪೂರ್ವ ಸೌಂದರ್ಯಕ್ಕೆ ಮುಗ್ಧನಾಗಿ, ಸಂಗೀತ ಕೇಳಿ ತನ್ಮಯನಾಗಿ, ಇಷ್ಟುದಿನ ಮದುವೆಯಾಗು ವು ದಿಲ್ಲ ವೆಂದು ಹಠ ಹಿಡಿದಿದ್ದಾತ ಆ ಗಂಧ ರ್ವಿಣಿಯನ್ನು ವಿವಾಹವಾದ.

ಮದುವೆಯೆಲ್ಲಾ ಮುಗಿದಮೇಲೆ ಮಂತ್ರ ಫಲದ ರಹಸ್ಯ ಪ್ರಮೋದನಿಗೆ ತಿಳಿಯಿತು. ಈಗ ತಿಳಿದರೆಮಾತ್ರ ಏನು?

ಗಂಧರ್ವಿಣಿಯನ್ನು ಮನಸಾರೆ ಪ್ರೀತಿಸಿ ಪ್ರೇಮಿಸಿ ವಿವಾಹವಾದ. ಆದುದರಿಂದ ತನ್ನ ಪ್ರಜೆಗಳು ಹೂಡಿದ ಈ ಕಾರ್ಯಕ್ಕೆ ಪ್ರಮೋದನು ತನ್ನ ಸಂತೋಷವನ್ನು ವ್ಯಕ್ತಪಡಿಸಿದ" ಎಂದು ಹೇಳಿದ ಮಿತ್ರಾನಂದ.

ತರುವಾಯ ಗಂಧರ್ವಿಣಿಗೆ ಮಹೀಪಾಲನು ಜನಿಸಿದುದೂ, ರಾಜನು ಮಂದಾಕಿನಿಯನ್ನು ಮೋಹಿಸಿ ಮದುವೆಯಾದುದೂ, ಆಕೆಗೆ ಭಾನುತೇಜನು ಜನಿಸಿದುದೂ ಅಂದಿನಿಂದ ಆಕೆ ಮ ಹೀ ಪಾ ಲ ನ ನ್ನು ಆತನ ತಾಯಿಯ ಎದುರಿನಲ್ಲೇ ಅವಮಾನಮಾಡು



ವುದೂ ಹೇಳಿ, ಮಿತ್ರಾನಂದ ಮತ್ತೆಮುಂದು ವರಿಸಿದ :

" ಮಗನಿಗೆ ತನ್ನ ಎದುರಾಗಿಯೇ ಮಂದಾಕಿನಿ ಕೊಡುವ ಹಿಂಸೆಗಳನ್ನು ನೋಡಿ ಸಹಿಸಲಾರದಾದಳು ಗಂಧರ್ವಿಣಿ. ಒಂದು ದಿನ ಗಂಧರ್ವಿಣಿ ತನ್ನ ಸಖಿಯರೊಂದಿಗೆ ಸಮಾಲೋಚನೆಮಾಡಿದಳು.

"ನಾನು ಎದು ರಾ ಗಿ ದ್ದ ರೆ ಮ ಗ ನಿ ಗೆ ಮತ್ತಷ್ಟುಯಾತನೆ ಕೊಡುವಳು ಮಂದಾಕಿನಿ. ನಾನಿಲ್ಲದಿದ್ದರೆ....? ಒಂದುವೇಳೆ ತನ್ನ ಮಗನಿಗೇ ಪಟ್ಟಕಟ್ಟಬೇಕೆಂಬ ದುರ್ಬುದ್ಧಿ ಒಂದು. ಯಾವುದಾದರೂ ತಂತ್ರ ಹೂಡ ಬ ಹು ದು. ಆದರೂ ನಾನು ದೂರದಲ್ಲಿದ್ದುಕೊಂಡೇ ಆಕೆಯ ಚರ್ಯೆಗಳ ಮೇಲೆ ಗಮನ ವಿಟ್ಟಿರುತ್ತೇನೆ! ಹೀಗೆಂದು ನಿರ್ಧರಿಸಿ ಗಂಧರ್ವಿಣಿ ತನ್ನ



ಮಗನನ್ನು ಅಗಲಿ ಒಂದಾನೊಂದು ನಿರ್ಜನ ಪ್ರದೇಶ ವೆಂದುಕೊಂಡಿದ್ದ ಸ್ಥಳವನ್ನು ಸೇರಿ ಕೊಂಡಳು.

ಆಶ್ಚರ್ಯಕರವಾದ ವಿಷಯವೆಂದರೆ ಅಲ್ಲಿ ತನಗೂ ಮತ್ತೂ ತನ್ನ ಪರಿವಾರಕ್ಕೂ ಬೇಕಾದ ಸೌಕರ್ಯಗಳೆಲ್ಲವೂ ಸಿದ್ಧವಾಗಿದ್ದವು. ಈ ಸೊಗಸಾದ ಏರ್ಪಾಟುಗಳು ಅಲ್ಲಿ ಹೇಗಾಯಿತೋ ಅವರಿಗೇ ತಿಳಿಯದು. ಅಂತೂ ಅವರೆಲ್ಲಾ ಅಲ್ಲೇ ಸಂತೋಷವಾಗಿ ಕಾಲ ನೂಕುತ್ತಿದ್ದರು.

ಹೀಗೇ ಇರುವಲ್ಲಿ ತನ್ನ ಮಗನನ್ನು ಸಿಂಹಾಸನದಮೇಲೆ ಕೂಡಿಸುವ ಆಶೆಯಿಂದ ಸವತಿ ಮಂದಾಕಿನಿ ತನ್ನ ತಂದೆಯಾದ ಕಿರಾತರಾಜ ಮತ್ತು ಪುರೋಹಿತನಾದ ರಾಜಗುರುವಿನೊಂದಿಗೆ ಸಂಚುಹೂಡಿದಳು. ನಾಲ್ಕು ವರ್ಷದಿಂದಿದ್ದ ದೇಶಾರಿಷ್ಟದ ನೆಪಹೂಡಿ ಮಂದಾಕಿನಿ ಸವತಿಯ ಮಗನನ್ನು ಬಲಿಕೊಡಿಸಲು ನಿಶ್ಚಯಿಸಿದಳು.

ಇದೆಲ್ಲವನ್ನೂ ಗಮನಿಸುತ್ತಿದ್ದ ಗಂಧರ್ವನು ಒಬ್ಬ ವೃದ್ಧನರೂಪದಲ್ಲಿ ಗಂಧರ್ವಿಣಿ ನೆಲೆಸಿದ್ದ ಆ ನಿರ್ಜನ ಪ್ರದೇಶಕ್ಕೆ ಹಾರಿಬಂದು ಎಲ್ಲ ವಿಷಯವನ್ನೂ ಸೂಕ್ಷ್ಮವಾಗಿ ತಿಳಿಸಿದ. ಅಷ್ಟೇ ಅಲ್ಲ. ಆಕೆ ರಾಜಹಂಸದಂತೆ ಬದಲಾಯಿಸುವ ಶಕ್ತಿ ಕೊಟ್ಟು, ಆಕೆಯೊಂದಿಗಿದ್ದ ಹತ್ತು ಮಂದಿ ಚೇಟಿಯರನ್ನು ಮತ್ತೆ ಹತ್ತುಮುತ್ತುಗಳಂತೆ ಬದಲಾಯಿಸಿ ಕಂಠಹಾರಧರಿಸಿ ಕೊಂಡ.

ಆತರುವಾಯ—

ಸರಿಯಾದ ಸಮಯಕ್ಕೆ ಹಂಸರೂಪದಲ್ಲಿದ್ದ ಗಂಧರ್ವಿಣಿ ತನ್ನ ಮಗನನ್ನು ಹಾರಿಸಿಕೊಂಡು ಹೋಗುವುದೂ, ಮಂದಾಕಿನಿ ವಿಷತಿಂದು ಪ್ರಾಣವನ್ನುಬಿಡುವುದೂ, ಪ್ರಮೋದನು ರಾಜಗುರುವನ್ನು ತೆಗಳಿದ್ದೂ, ಆತನು ಮಂದಪಾಲನೊಂದಿಗೆ ಸೇರಿದುದೂ, ಒಳಸಂಚಿನಿಂದ ತಪ್ಪಿಸಿಕೊಂಡ ಕಿರಾತರಾಜನು ಮೊಮ್ಮಗನಾದ ಭಾನುತೇಜನನ್ನು ಸಲಹಿ ದೊಡ್ಡವನನ್ನಾಗಿ ಮಾಡಿದುದೂ, ಅವನಿಗೆ ಮದುವೆಯಾದುದೂ ಆ ಭಾನುತೇಜನಿಗೆ ಚಿತ್ರಭಾನು ಎಂಬ ಮಗ ಹುಟ್ಟಿದುದೂ, ಹೇಳಿ ಮತ್ತು ಇನ್ನೂ ಏನೋ ಹೇಳುವಷ್ಟರಲ್ಲಿ ಆ ಯುವಕನು ಅಡ್ಡಬಂದು,

"ಏನು, ಚಿತ್ರಭಾನುವೇ?" ಎಂದು ಆಶ್ಚರ್ಯಚಕಿತನಾಗಿ ಕೇಳಿದ. ಅದಕ್ಕೆ ಮುಗುಳು ನಗುತ್ತಾ ವಿತ್ರಾನಂದ ನೆಂದ:

"ಹೌದು, ಮಗು ಹೌದು. ನೀನೇ ಆ ಚಿತ್ರಭಾನು. ಈ ಛಲ್ಲಾಣ ರಾಜ್ಯ ನಿನ್ನದು. ಇದು ಹೇಗೆಂದು ನಿನಗೆ ಆಶ್ಚರ್ಯವಾಗಬಹುದು. ನೀನು ತಲೆ ಎತ್ತದಂತೆ ದ್ರೋಹ ಬಗೆಯುತ್ತಿದ್ದಾನೆ ಆ ಚಂಡಾಲ ರಾಜಗುರು" ಎಂದು ಆ ವರೆಗೂ ನಡೆದ ವಿಷಯವನ್ನೆಲ್ಲಾ ತಿಳಿಸಿದ.

ತರುವಾಯ

"ಮಗೂ, ಚಿತ್ರಭಾನೂ, ಅಂದು ಹಂಸದ ಮೇಲೆ ಹತ್ತಿ ಕುಳಿತ ಮಹೀಪಾಲನನ್ನು ತಾಯಿ ಹಾರಿಸಿಕೊಂಡು ಹೋಗುತ್ತಿದ್ದರೆ ಅವನಿಗೆ ಎಲ್ಲಾ ಅಯೋಮಯವಾಗಿ ಕಾಣಿಸಿತು. ಆದರೆ ತಾನು ಬಲಿಪೀಠದಿಂದ ಹೊರ ಬಿದ್ದು ತಾಯಿಯ ಹತ್ತಿರ ಸೇರಿಕೊಂಡೆನಲ್ಲಾ ಎಂದು ಧೈರ್ಯವಹಿಸಿದ.

ಆ ಬಂಗಾರದ ಹಂಸ ಹಾಗೇ ಆಕಾಶ ಮಾರ್ಗದಲ್ಲಿ ಹಾರಿ, ನದಿ, ಬೆಟ್ಟಗಳನ್ನು ದಾಟಿಕೊಂಡು ಹೋಗಿ, ಒಂದಾನೊಂದು ದ್ವೀಪದಲ್ಲಿ ನಿಂತಿತು. ಅದರ ಹೆಸರು ಮಂಜುಳ ದ್ವೀಪ. ಆ ದ್ವೀಪದ ರಾಜ ತಪೋವರ್ಧನ.

ರತ್ನಕಿರೀಟಧಾರಿಯಾದ ಒಬ್ಬ ರಾಜಕುಮಾರನು ಬಂಗಾರದ ಹಂಸದ ಮೇಲೆ ಬಂದು ತಮ್ಮ ದ್ವೀಪದಲ್ಲಿ ಇಳಿದ ವಿಷಯ ಕ್ಷಣಮಾತ್ರದಲ್ಲಿ ತಿಳಿದುಬಿಟ್ಟಿತು ಆ ರಾಜನಿಗೆ. ತಿಳಿದಕೂಡಲೇ ತಪೋವರ್ಧನನು ಆಶ್ಚರ್ಯಪಟ್ಟು ಇದೊಂದು ದೇವರ ಪ್ರಸಾದವೆಂದು ಆತನು ಸಂತೋಷ ಭರಿತನಾಗಿ ಆತುರಾತುರದಿಂದ ಕಾಲು ನಡಿಗೆಯಿಂದ ಆ ಸ್ಥಳವನ್ನು ಸೇರಿದ.




ರಾಜನನ್ನು ಕಂಡ ಕೂಡಲೇ ಹಂಸರೂಪದಲ್ಲಿದ್ದ ಗಂಧರ್ವಿಣಿ ತನ್ನ ಮತ್ತು ತನ್ನ ಮಗನ ವಿಷಯವನ್ನು ಸವಿಸ್ತಾರವಾಗಿ ತಿಳಿಸಿದಳು. ಮಾನವ ಭಾಷೆಯಲ್ಲಿ ಮಾತನಾಡಿದ ಆ ಹಂಸವನ್ನು ನೋಡಿ ಚಕಿತನಾದ ತಪೋವರ್ಧನ. "ರಾಜನೇ, ಈ ಎಳೆಯನನ್ನು ನಿನಗೆ ಒಪ್ಪಿಸುತ್ತಿರುವೆನು. ಇವನನ್ನು ನೋಡಿಕೊಳ್ಳುವ ಭಾರವೆಲ್ಲವೂ ನಿನ್ನದೇ" ಎಂದು ಹೇಳಿ ಆ ಹಂಸ ಆಕಾಶಕ್ಕೆ ಹಾರಿಹೋಗಿ, ಶಾಪವಿಮುಕ್ತಿಹೊಂದಿ, ಗಂಧರ್ವಲೋಕವನ್ನು ಸೇರಿಕೊಂಡಿತು.

ದೈವವಶಾತ್ ತನಗೆ ಲಭಿಸಿದ ಹುಡುಗನನ್ನು ತಪೋವರ್ಧನನು ತುಂಬಾ ಮಮತೆಯಿಂದ ನೋಡಿಕೊಳ್ಳುತ್ತಾ ಸಮಸ್ತವಿದ್ಯೆಗಳಲ್ಲಿ ಆತನನ್ನು ಪ್ರವೀಣನನ್ನಾಗಿ ಮಾಡಿದ.

ತನ್ನ ಮಗಳನ್ನು ಆತನಿಗೇ ಕೊಟ್ಟು ವಿವಾಹ ಮಾಡಿದ.

ಆದರೆ ಮಹೀಪಾಲನು ಬಹಳದಿನ ಸಂತೋಷವಾಗಿ ಕಾಲಕಳೆಯಲು ಆಗಲಿಲ್ಲ.

ಈಗ ರತ್ನಕಿರೀಟವು ಮಂಜುಳದ್ವೀಪವನ್ನು ಸೇರಿಕೊಂಡಿತೆಂದು ನೆರೆಹೊರೆಯ ರಾಜರಿಗೆ ತಿಳಿಯಿತು.

ಅವರಲ್ಲೊಬ್ಬ ರಾಜನು ಆ ಕಿರೀಟವನ್ನು ಪಡೆಯಬೇಕೆಂಬ ಆಶೆಯಿಂದ ತಪೋವರ್ಧನಮೇಲೆ ದಂಡೆತ್ತಿ ಹೋಗಲು ಮನಸ್ಸು ಮಾಡಿದ. ಈ ವಿಷಯ ತಿಳಿದಕೂಡಲೇ ಮಹೀಪಾಲನ ಮನಸ್ಸು ಪರಿಪರಿವಿಧದಲ್ಲಿ ಹರಿದಾಡಿತು.

"ನನ್ನನ್ನು ಗಂಡಾಂತರದಿಂದ ಪಾರುಮಾಡಲು ನಮ್ಮತಾಯಿ ಇಲ್ಲಿಗೆತಂದು ಸೇರಿಸಿ, ತಪೋವರ್ಧನ ಮಹರಾಜನಿಗೆ ಒಪ್ಪಿಸಿದ್ದಾಳೆ. ತನ್ನಮೇಲೆ ವಿಶ್ವಾಸವಿಟ್ಟು ಒಪ್ಪಿಸಿರುವಳೆಂದು ಈ ಮಹಾರಾಜನು ನನ್ನನ್ನೂ ತುಂಬಾ ಪ್ರೀತಿಯಿಂದ ನೋಡಿಕೊಳ್ಳುತ್ತಿದ್ದಾನೆ. ಆದರೂ ನನಗೆ ಮನಶ್ಶಾಂತಿಯಿಲ್ಲವಾಗಿದೆ ಕಾರಣವೇನೋ ತಿಳಿಯದು. ವೃದ್ಧನಾದ ನನ್ನತಂದೆ ಭಲ್ಲಾಣರಾಜ್ಯದಲ್ಲಿ ಹೇಗಿರುವನೋ ಹೇಗೋ? ಅದೃಶ್ಯಳಾದ ನನ್ನಮಾತೆ ಏನಾದಂತೆ? ಮಧ್ಯೆ ಈ ಕಿರೀಟಬೇರೆ ನನ್ನಕೈಯಲ್ಲೇಉಳಿದಿದೆ. ಈಗ ನೆರೆಹೊರೆಯ ರಾಜರ ದೃಷ್ಟಿ ಇದರಮೇಲೆ ಬಿದ್ದಿದೆ. ಇದನ್ನು ಪಡೆಯುವಸಲುವಾಗಿ ಯುದ್ಧಮಾಡಲೂ ಸಹ ಬರುವರೆಂದು ತಿಳಿದುಬಂದಿದೆ. ನಿಜವಾಗಿ ಯುದ್ಧನಡೆದರೆ ಜಯಾಪಜಯಗಳು ಹೇಗಿರುವುದೋ, ಎಂತಿರುವುದೋ? ಏನಾದರಾಗಲೀ, ಈ ರತ್ನಕಿರೀಟವನ್ನು ಸಾಧ್ಯವಾದಷ್ಟು ಗುಟ್ಟಾಗಿ ಭದ್ರಪಡಿಸುವುದು ನನ್ನವಿಧಿ, ಕರ್ತವ್ಯ....ಈಗಿನ ಪರಿಸ್ಥಿತಿಯಲ್ಲಿ ನಾನು ಮಾಡಬಲ್ಲದು ಇಷ್ಟೇ" ಎಂದು ನಿಶ್ಚಯಿಸಿದ.

ಈರೀತಿ ನಿರ್ಧಾರಕ್ಕೆ ಬಂದು ಮಹೀಪಾಲನು ಒಂದು ಗೊಂಡಾರಣ್ಯವನ್ನು ಪ್ರವೇಶಿಸಿದ.

ಅಲ್ಲಿ ನರನ ಕಣ್ಣಿಗೆ ಕಾಣಬರದ ಸ್ಥಳದಲ್ಲಿ, ಒಂದು ಮರದ ಕೊಂಬೆಗಳ ಸಂದಿನಲ್ಲಿ, ತುಂಬಾ ಜಾಗರೂಕತೆಯಿಂದ ರತ್ನಕಿರೀಟವನ್ನು ಬಚ್ಚಿಟ್ಟ.

ಅಷ್ಟರಲ್ಲಿ—

(ಇನ್ನೂ ಇದೆ)






ಶ್ರೀರಂಗಪಟ್ಟಣದಲ್ಲಿ ಚಿಕ್ಕವೆಂಕಟಪ್ಪ ಅಂತ ಒಬ್ಬ ಗೊಲ್ಲರವನಿದ್ದ. ಆ ಊರಿನಲ್ಲಿ ಬಹಳ ಜನ ಆ ಜಾತಿಗೆ ಸೇರಿದವರು. ಅವರೆಲ್ಲರಿಗೂ ಹಾಲಿನ ವ್ಯಾಪಾರವೇ ಜೀವನೋಪಾಯ. ಅವರಲ್ಲಿ ಪ್ರತಿಯೊಬ್ಬರಿಗೂ ಸಾಕಾದಷ್ಟು ಹಾಲುಕರೆಯುವ ಹಸುಗಳಿದ್ದವು.

ಆ ಹಾಲಿನವರೆಲ್ಲ ತುಂಬಾ ಹಣವಂತರಾಗಿ ಅಭಿವೃದ್ಧಿಹೊಂದುತ್ತಿದ್ದರು. ಅವರ ಅಭಿವೃದ್ಧಿಗೆ ಮುಖ್ಯಕಾರಣವೊಂದಿತ್ತು. ಸಾಧ್ಯವಾದಷ್ಟೂ ಹಾಲಿಗೆ ಅವರು ನೀರನ್ನು ಬೆರೆಸಿ ಮಾರುತ್ತಿದ್ದರು.

ಯಾರಾದರೂ ಕೇಳಿದರೆ ನೀರು ಬೆರೆಸಿಲ್ಲವೆಂದೇ ಉತ್ತರ ಹೇಳುವರು! ಊರಿನಲ್ಲಿ ಎಲ್ಲರೂ ಹೀಗೇ ಮಾಡುತ್ತಿದ್ದರೆ ಕೊಳ್ಳುವವರು ತಾನೇ ಏನು ಮಾಡಲಾಪರು? ಬೇರೆದಾರಿಯಿಲ್ಲದೆ, ಆ ನೀರು ಹಾಲಿನಲ್ಲೇ ತೃಪ್ತಿಪಡಬೇಕಾದ ಸನ್ನಿವೇಶವದು.

ಚಿಕ್ಕವೆಂಕಟಪ್ಪನಿಗೂ ಸಹ ಒಂದು ಹಸು ಇತ್ತು. ಅದು ಒಂದು ಹೊತ್ತಿಗೆ ಎರಡು ಸೇರು ಹಾಲು ಕೊಡುತ್ತಿತ್ತು. ಹಾಲಿನಲ್ಲಿ ನೀರು ಬೆರೆಸುವುದಾಗಲೀ, ಬೆರಸಲಿಲ್ಲವೆಂದು ಸುಳ್ಳು ನುಡಿಯುವುದಾಗಲೀ ಚಿಕ್ಕವೆಂಕಟಪ್ಪನಿಗೆ ಹಿಡಿಸದು. ಆದುದರಿಂದ ಹಾಲು ಕರೆದ ಕೂಡಲೇ ಅದನ್ನು ಮಾರಿಬಿಡುವನು. ಅನೇಕರು ಈತನ ಪ್ರಾಮಾಣಿಕತೆಯನ್ನು ಮೆಚ್ಚಿಕೊಳ್ಳುತ್ತಿದ್ದರು.

ಉಳಿದ ಹಾಲಿನವರಂತೆ ಆತನು ಮೋಸಮಾಡದೆ ಸುಳ್ಳು ನುಡಿಯದೆ ಹಾಲು ಮಾರುತ್ತಿದ್ದುದರಿಂದ ಕೆಲದಿನಗಳಲ್ಲೇ ಚಿಕ್ಕವೆಂಕಟಪ್ಪನಿಗೆ ಬಹಳ ನಷ್ಟವುಂಟಾಯಿತು.

ತನ್ನ ಜೊತೆಗಾರರು ಸೇರು ನೀರು ತುಂಬುತ್ತಿದ್ದರು. ವೆಂಕಟಪ್ಪ ಮಾರುವ ಹಾಲು ತಾಜಾ ಆದರೂ ಜನ ಸೇರಿಗೆ ಒಂದಾಣೆಗಿಂತಲೂ ಹೆಚ್ಚು ಕೊಡುವ ಗೋಜಿಗೆ ಹೋಗಲಿಲ್ಲ. ಅಂದರೆ ಚಿಕ್ಕವೆಂಕಟಪ್ಪನಿಗೆ ಸೇರಿಗೆ ಒಂದಾಣೆಯಂತೆ ನಾಲ್ಕು ಸೇರಿಗೆ ನಾಲ್ಕು ಆಣೆ ಮಾತ್ರ ಹೆಚ್ಚಾಗಿ ಬರುತಿತ್ತೆಂದು ತಿಳಿಯಿತು. ಸೇರು ಹಾಲಿಗೆ ಸೇರು ನೀರು ತುಂಬಿ

ಪಿ. ವಿ. ಆರ್. ಮೂರ್ತಿ, ಮದರಾಸು




ಈಸ್ಥಿತಿ ನೆನೆಸಿಕೊಂಡರೆ ಚಿಕ್ಕ ವೆಂಕಟಪ್ಪನ ಹೆಂಡತಿಗೆ ಒಂದುವಿಧವಾದ ಜಿಗುಪ್ಸೆ. ತನ್ನ ಸರಿಹೊಂದಿಗರೆಲ್ಲ ವೈಭವದಿಂದ ಮೆರೆದಾಡುತ್ತಿರುವಾಗ ಅವರ ಮುಂದೆ ತಾನುಮಾತ್ರ ಹರಕು ಚಿಂದಿಗಳಲ್ಲಿ ಕಾಲನೂಕಬೇಕಾದ ಪರಿಸ್ಥಿತಿ ನೆನೆಸಿ ನಾಚಿಕೆಯುಂಟಾಯಿತು.

"ನೀವೂ ಸಹ ಹಾಲಿಗೆ ನೀರುಬೆರೆಸಿ ಮಾರದೆ ಹೋದರೆ ನಮ್ಮ ಸಂಸಾರ ಅಳುತ್ತಲೇ ಇರಬೇಕಾಗುತ್ತದೆ. ಆದುದರಿಂದ ಈ ದಿನದಿಂದ ನೀವು ನೀರು ಬೆರೆಸಿ ಮಾರಲು ತೆಗೆದುಕೊಂಡು ಹೋಗದಿದ್ದರೆ ನಾ ಸುಮ್ಮನಿರಲಾರೆ" ಎಂದು ಹಠಹಿಡಿದು ಕೂತಳು ಆತನ ಹೆಂಡತಿ ಒಂದು ದಿನ.

ಮಾರುವ ಹಾಲಿನವರಮುಂದೆ ಇದೆಷ್ಟು ಮಹಾ! ನಿಜವಾಗಿ ಲೆಕ್ಕಹಾಕಿ ನೋಡಿದರೆ ಹಾಲು ಮಾರಿ ಬರುವ ಆದಾಯ ಹಸುವಿನ ಮೇವಿನ ಖರ್ಚಿಗೂ ಸಾಕಾಗುತ್ತಿರಲಿಲ್ಲ.

ಅತ್ತ ನೋಡಿದರೆ ನೆರೆಹೊರೆ ಹಾಲಿನವರ ಮನೆಯ ಹೆಂಗಸರು ವಿವಿಧವಾದ ಒಡವೆಗಳನ್ನು ಮಾಡಿಸಿಕೊಂಡು, ಮೈತುಂಬಾ ಅಲಂಕಾರ ಮಾಡಿಕೊಳ್ಳುತ್ತಿದ್ದಾರೆ. ಬರಿ ಜೋಪಡಿ ಗುಡಿಸಲು ಹಾಕಿಕೊಂಡಿದ್ದವರ ಮನೆಗಳು ಈ ವರ್ಷ ಹೆಂಚಿನ ಮನೆಗಳಾಗಿಯೂ, ಹೆಂಚಿನ ಮನೆಗಳು ತಾರಸು ಮನೆಗಳಾಗಿಯೂ ಬದಲಾಗುತ್ತಿದೆ.

ಆದರೆ ಚಿಕ್ಕ ವೆಂಕಟಪ್ಪನ ಸ್ಥಿತಿಗತಿಗಳು ಮಾತ್ರ ಸುಧಾರಿಸುವ ಸೂಚನೆಗಳು ಕಾಣಬರಲಿಲ್ಲ.

ಹೆಂಗಸು ಹಠಹಿಡಿದರೆ ಗಂಡಸಾದವನು ಏನುಮಾಡುವನು? "ನೀರು ಬೆರಸು ಎಂದರೆ ಬೆರೆಸುವೆನು. ಆದರೆ ಹಾಲು ಕೊಳ್ಳುವವರು ಮಾತ್ರ ಕೇಳಿದರೆ ಬೆರೆಸಿಲ್ಲವೆಂದು ಸುಳ್ಳಾಡಲಾರೆ" ಎಂದ ಚಿಕ್ಕವೆಂಕಟಪ್ಪ. ಗಂಡನ ಮನವನ್ನು ಅರಿತ ಆಕೆ "ಸರಿ, ನೀನೇನೂ ಹೇಳಬೇಕಾಗಿಲ್ಲ. ನಾನು ಹೇಳಿದಂತೆ ಮಾಡು. ಆಗ ನಾವೂ ಸಹ ಇತರರಂತೆ ಹಣ ಸಂಪಾದಿಸಬಹುದು" ಎಂದು ಸಮಾಧಾನಕೊಟ್ಟಳು.

ಮಾರನೇಯ ದಿನ ಚಿಕ್ಕವೆಂಕಟಪ್ಪ ಅಗಲವಾಗಿ ನಾಮಹಾಕಿಕೊಂಡು ಹಾಲುಕೊಡಲು ನಗರದೊಳಕ್ಕೆ ಹೋದ. ಪ್ರತಿದಿನದಂತೆ ಹಾಲು ಗಟ್ಟಿಯಾಗಿ ಇರದಿರುವುದನ್ನು ಕಂಡು

ಆತನು ವಾಡಿಕೆಯಾಗಿ ಹಾಕುವ ಮನೆಯ ಹೆಂಗಸರು ಚಿಕ್ಕವೆಂಕಟಪ್ಪನನ್ನು ಈ ರೀತಿ ಕೇಳಲಾರಂಭಿಸಿದರು.

"ಇದೇನಿದು ವೆಂಕಟಪ್ಪಾ, ನಿನಗೂ ಸಹಿತ ದುರ್ಬುದ್ಧಿ ಹುಟ್ಟಿತೇ? ಹಾಲಿನಲ್ಲಿ ನೀರು ಬೆರಸಿದಂತಿದೆಯಲ್ಲಾ! ಇಷ್ಟೇನೇ ನಿನ್ನ ದೊಡ್ಡಸ್ತಿಕೆ" ಎಂದು ಗದರಿಸಿಕೊಂಡರು.

"ಆಣೆಯಿಟ್ಟೆ ತಾಯಿ. ನಾನು ಹಾಲಿಗೆ ನೀರು ಹಾಕಲೇ ಇಲ್ಲ" ಎಂದು ಚಿಕ್ಕ ವೆಂಕಟಪ್ಪ ಉತ್ತರ ಹೇಳಿದ.

ಆದಕ್ಕವರು "ಓಹೋ, ಸುಳ್ಳು ಬೇರೆ ಹೇಳಲು ಪ್ರಾರಂಭಿಸಿದೆಯೋ" ಎಂದು ತುಸ ಕೋಪಗೊಂಡರು. "ಇಲ್ಲ ತಾಯಿ, ನನ್ನ ನಂಬಿ ಅಮ್ಮ. ನನ್ನ ಮಾತು ಸುಳ್ಳಲ್ಲ. ನಾನು ಹಾಲಿಗೆ ನೀರು ಸುರಿದಿಲ್ಲ" ಎಂದು ಮತ್ತೆ ಅದೇ ಮಾತು ಹೇಳಿದ.

ನಾಲ್ಕುಮಂದಿ ಒಟ್ಟುಗೂಡಿ "ಏನಯ್ಯಾ ಹಾಲು ಬರೀ ನೀರು, ಚೆನ್ನಾಗಿ ಕಾಣುತ್ತಿದೆ, ಇಲ್ಲವೆಂದು ಸಾಧಿಸುತ್ತಿರುವೆ" ಎಂದು ದಬಾಯಿಸಿದರು.

ಆಗ ಚಿಕ್ಕವೆಂಕಟಪ್ಪ "ನಂಬಿಕೆಯಿಲ್ಲವಾದರೆ ನಮ್ಮಾಕೆಯನ್ನು ಕೇಳಿ, ಆಕೆಯೇ ಹಾಲಿನ ಡಬ್ಬ ತಂದುಕೊಟ್ಟವಳು. ಏನು ಕರ್ಮವೋ ನನ್ನ ಮಾತನ್ನು ನಂಬುವುದಿಲ್ಲವಲ್ಲಾ ನೀವು" ಎಂದ.

ವಿವರವಾಗಿ ಕೇಳಲು ಚಿಕ್ಕವೆಂಕಟಪ್ಪ ನಡೆದ ಸಂಗತಿ ಹೇಳಿದ.




ಹೆಂಡತಿ ತಂದಿಟ್ಟ ಡಬ್ಬದೊಳಕ್ಕೆ ತಾನು ಕರೆದ ಎರಡು ಸೇರು ಹಾಲನ್ನು ಹುಯಿದೆ ಎಂದು ತಿಳಿಸಿದ. ಇದೀಗ ಆಕೆ ಮಾಡಿದ ಉಪಾಯ.

ತನ್ನ ಗಂಡ ಸುಳ್ಳು ಮಾತ್ರ ನುಡಿಯುವವನಲ್ಲವೆಂದು ಚಿಕ್ಕವೆಂಕಟಪ್ಪನ ಹೆಂಡತಿ ಅರಿತಿರುವಳು. ಆದುದರಿಂದ ಆತ ಸುಳ್ಳು ಹೇಳದಿರುವಂತಹ ಉಪಾಯ ಮಾಡಿದಳು. ಚಿಕ್ಕವೆಂಕಟಪ್ಪನೂಸಹ ಸಮ್ಮತಿಸಿದ ಈ ಉಪಾಯಕ್ಕೆ.

ಈ ವಿಷಯವೆಲ್ಲಾ ತಿಳಿದ ತರುವಾಯ ಹೊಟ್ಟೆ ಬಿರಿಯುವಂತೆ ನಗತೊಡಗಿದರು ಜನ. ಆದರೆ ಚಿಕ್ಕ ವೆಂಕಟಪ್ಪ ಸತ್ಯವಾದಿ ಎಂಬುದನ್ನು ಮಾತ್ರ ಯಾರೂ ಸಂದೇಹಿಸಲಿಲ್ಲ.

# ನಾಲ್ಕು ಕಡೆಯ ಸುದ್ದಿ

ಅಮೇರಿಕಾದೇಶದ ಇಬ್ಬರು ಖಗೋಳ ಶಾಸ್ತ್ರಜ್ಞರು ಒಂದು ನಕ್ಷತ್ರವನ್ನು ಕಂಡುಹಿಡಿದಿರುತ್ತಾರೆ. ಅದರ ಗಾತ್ರ ಭೂಗೋಳದ ಮೂರನೇ ಒಂದು ಭಾಗದಷ್ಟು ಮಾತ್ರವಿದೆ. ಆ ನಕ್ಷತ್ರದಿಂದ ಒಂದು ವಿಧವಾದ ವಿಚಿತ್ರವಾದ ದ್ರವ್ಯ ಉದ್ಭವಿಸುವುದು. ಈ ದ್ರವ್ಯದ ಭಾರ ವರ್ಣಿಸಲಸಾಧ್ಯ. ಒಂದು ಚಿಕ್ಕ ಬೆಂಕಿ ಪೊಟ್ಟಣದಲ್ಲಿ ಈ ದ್ರವ್ಯ ತುಂಬಿದರೆ ಅದು ಸಾವಿರಟನ್ನುಗಳ ಭಾರ ವಿರುವುದು!

ಹೀಗೆ ವಿಚಿತ್ರವಾಗಿರುವ ಆ ನಕ್ಷತ್ರದ ವಾತಾವರಣವೂಸಹ ಆಶ್ಚರ್ಯಕರವಾದುದು. ಅದರ ಆಕರ್ಷಕಶಕ್ತಿ ಭೂಮಿಯ ಶಕ್ತಿಗಿಂತಲೂ 4,00,000,000 ಭಾಗ ಅಧಿಕವಾಗಿರುವುದು. ಇದರ ಪ್ರಕಾರ ಭೂಮಿಯಮೇಲೆ 150 ಪೌಂಡು ತೂಕವಿರುವಾತನು ಈ ನಕ್ಷತ್ರದಮೇಲೆ ನಿಂತುಕೊಂಡರೆ ಕೆಲವು ಸಾವಿರ ಟನ್ನುಗಳಷ್ಟು ಭಾರವಿರುತ್ತಾನೆ.

* * * *

ನಾಲ್ಕುಸಾವಿರ ವರ್ಷಗಳ ಹಿಂದೆ ಜೇಬುಗಳೆಂದು ಇರಲೇ ಇಲ್ಲವೆಂದು ಬಟ್ಟೆಗಳ ಪರಿಶೋಧಕರೊಬ್ಬರು ನಿರ್ಧರಿಸಿದ್ದಾರೆ.

ಆ ಕಾಲದಲ್ಲಿ ಜೇಬೆಂದರೇನೆಂದು ಮನುಷ್ಯನಿಗೆ ತಿಳಿದಿರಲಿಲ್ಲ. ಆ ಕಾರಣ ಹದಿನೇಳನೇ ಶತಮಾನದವರಿವಿಗೆ ಸರಕುಗಳನ್ನೂ, ಹಣವನ್ನೂ ಜನರು ಚೀಲಗಳಲ್ಲಿ ಹೊತ್ತುಕೊಂಡು ತಿರುಗುತ್ತಿದ್ದರು.

ಈಗ ಹಿರಿಯರು ಜೇಬುಖರ್ಚಿಗೆಂದು ಚಿಕ್ಕವರಿಗೆ ಕಾಸು-ದುಡ್ಡು ಕೊಡುತ್ತಾರೆ. ಜೇಬು ಎಂದರೇನೆಂದು ತಿಳಿಯದಿದ್ದ ಕಾಲದಲ್ಲಿ ಜೇಬುಖರ್ಚು ಎಂತಹುದು!

* * * *

ಬ್ರಿಟಿಷ್ ಅಸೋಸಿಯೇಷನ್ ಜೇನು ನೊಣ ಪರಿಶೋಧನಾಶಾಖೆಯ ಅಧಿಪತಿ ಡಾ॥ ಸಿ. ಜಿ. ಬಟ್ಲರ್ ಅಲ್ಲಿನ ಶಾಸ್ತ್ರಜ್ಞರಿಗೆ ಒಂದು ವಿಚಿತ್ರಸಂಗತಿ ತಿಳಿಸಿದರು. ವಿಮಾನಧಾಳಿಯಿಂದ ತಪ್ಪಿಸಿಕೊಳ್ಳಲು ನಮ್ಮಲ್ಲಿರುವ ಸಾಧನಾಕ್ರಮದಂತೆಯೆ ಜೇನುನೊಣಗಳಲ್ಲೂಸಹ ಕೆಲವು ಪದ್ಧತಿಗಳು ರೂಢಿಯಲ್ಲಿವೆಯಂತೆ!

ಶತ್ರು ನೊಣಗಳು ಧಾಳಿಮಾಡಿ ಜೇನು ಕದ್ದೊಯ್ಯಲು ಬರುತ್ತವೆ. ಅವುಗಳ ಬರುವಿಕೆಯನ್ನು ತಿಳಿಯಲು ಜೇನು ಗೂಡಿನಬಳಿ ಕೆಲವು ನೊಣಗಳು ಕಾವಲಿರುತ್ತವೆ. ಗೂಡಿನಲ್ಲಿರುವ ನೊಣಗಳು ಹಗಲಿರುಳೂ ಕಾವಲಿರುವುದಿಲ್ಲ. ಶತ್ರು ನೊಣಗಳು ಧಾಳಿಮಾಡುವಾಗಲಾಗಲೀ, ಇತರ ಗೂಡುಗಳಿಂದ ಚದುರಿದ ನೊಣಗಳು ತಮ್ಮ ಗೂಡಿಗೆ ಬರುವಾಗಲಾಗಲೀ ಜೇನು ನೊಣಗಳಿಗೆ ಸುಳಿವು ತಿಳಿಯುತ್ತದೆ. ಆ ರೀತಿ ಎಚ್ಚರಿಕೆಬಂದಕೂಡಲೇ ಗೂಡಿನೊಳಗಿರುವ ನೊಣಗಳು ಹೊರಕ್ಕೆ ಬಂದು ತಮ್ಮ ಗೃಹವನ್ನು ರಕ್ಷಿಸಿಕೊಳ್ಳಲು ಸಿದ್ಧವಾಗುತ್ತವೆ. ಅಲ್ಲಿಯ ತನಕ ಅವು ನಿರಾತಂಕವಾಗಿ ಗೂಡಿನಲ್ಲಿರುತ್ತವೆ.




ಮಲ್ಲೇಶ್ವರದಲ್ಲಿ ಕಿಟ್ಟಣ್ಣ, ರಾಜು ಅಂತ ಇಬ್ಬರು ಹುಡುಗರಿದ್ದರು. ಅವರಿಬ್ಬರೂ ಒಂದೇ ಬೀದಿಯಲ್ಲಿ ವಾಸಿಸುತ್ತಿದ್ದರು; ನೆರೆಹೊರೆಯವರು, ಚಿಕ್ಕಂದಿನಿಂದಲೂ ಪ್ರಾಣ ಸ್ನೇಹಿತರಂತೆ ಬೆಳೆದರು.

ಇಬ್ಬರೂ ಒಂದೇ ಪಾಠಶಾಲೆಯಲ್ಲಿಯೂ ಆ ತರುವಾಯ ಒಂದೇ ಕಾಲೇಜಿನಲ್ಲಿ ಓದುತ್ತಿದ್ದರು. ಇಬ್ಬರೂ ಒಂದೇ ರೀತಿಯ ಬಟ್ಟೆ ಹಾಕುವರು.

ಯಾವುದೇ ಒಂದು ವಿಷಯದಲ್ಲಿ ಇವರಿಬ್ಬರಲ್ಲಿ ಭೇದವಿಲ್ಲವೆಂದು ಜನ ಹೇಳುವರು. ಅದಕ್ಕೆ ಸರಿಯಾಗಿ ಅವರಿಬ್ಬರಜೊತೆ ಬೇರೆಯಾಗುತ್ತಿರಲಿಲ್ಲ.

ಇಬ್ಬರೂ ತುಂಬಾ ಜಾಣರು. ವಯಸ್ಸಾದಂತೆ ಅವರು ನಾಲ್ಕು ಜನರ ಮುಂದೆ ತುಂಬಾ ನಾಜೂಕಾಗಿ, ಚಾಲೂಕು ತನದಿಂದ ನಡೆಯುತ್ತಿದ್ದರು.

ವಿದ್ಯೆ ಪೂರ್ತಿಯಾದ ತರುವಾಯ, ಅಷ್ಟೋ ಇಷ್ಟೋ ಆಸ್ತಿವಂತರಾದ್ದರಿಂದ ಚಾಕರಿಗಾಗಿ ಅಲೆದಾಡುವ ಪ್ರಯೋಗ ಬೀಳಲಿಲ್ಲ ಅವರಿಬ್ಬರಿಗೆ. ಸುಖವಾಗಿ ಮನೆಯಲ್ಲಿದ್ದುಕೊಂಡೇ ಕಾಲ ನೂಕುತ್ತಿದ್ದರು. ಅವರಿಬ್ಬರೂ ಒಂದೇ ಸಲ ಮದುವೆಯಾಗಬೇಕೆಂದೆಣಿಸಿರಬಹುದು. ಇಬ್ಬರಿಗೂ ಇನ್ನೂ ಮದುವೆಯಾಗಿರಲಿಲ್ಲ.

ಇಷ್ಟರಲ್ಲಿ ಕಿಟ್ಟಣ್ಣನ ತಂದೆ ತೀರಿಕೊಂಡ ಕಾರಣವೂ; ಎಲ್ಲ ವ್ಯವಸ್ಥೆಗಳನ್ನು ನೋಡಿಕೊಳ್ಳುತ್ತಿದ್ದ ರಾಜಣ್ಣನ ಸೋದರ ಮಾವ ಸ್ವಗ್ರಾಮಕ್ಕೆ ಹೊರಟುಹೋದ ಪ್ರಯುಕ್ತವೂ, ಇಬ್ಬರೂ ಒಂದೇಸಾರಿ ಮನೆ ವ್ಯವಹಾರಗಳಲ್ಲಿ ಕೈಹಾಕಬೇಕಾಯಿತು.

ಈ ರೀತಿ ಜೀವನದಲ್ಲಿ ಎಷ್ಟು ಬದಲಾವಣೆಯಾದರೂ ಅವರಿಬ್ಬರ ಸ್ನೇಹ ತುಸವಾದರೂ ಬದಲಾಯಿಸಲಿಲ್ಲ.

ಇವರಿಬ್ಬರ ಗೆಳೆತನವನ್ನು ಕಂಡು ಜನರು ತುಂಬಾ ಸಂತೋಷಪಡುತ್ತಿದ್ದರು. ಇಬ್ಬರೂ ನೋಡಲು ಸ್ಪುರದ್ರೂಪಿಗಳು. ತಿಂಡಿ ಬಟ್ಟೆಗಳಿಗೆ ಕೊರತೆಯೇ ಇಲ್ಲ. ಬುದ್ಧಿವಂತರು. ವಿದ್ಯಾವಂತರು. ಇವರಿಬ್ಬರ ಅನ್ಯೋನ್ಯತೆಯನ್ನು ಎಲ್ಲರೂ ಮೆಚ್ಚಿಕೊಳ್ಳುತ್ತಿದ್ದರು. ಇಷ್ಟು ಪ್ರಾಣಸ್ನೇಹಿತರಾದರೂ ಸಹ ಅವರಿಬ್ಬರ

ಎಸ್. ಎಸ್ ರಾಮು, ಶ್ರೀರಂಗಪಟ್ಟಣ



ನಡುವೆ ಒಂದುದಿನ ನಡುಬೀದಿಯಲ್ಲಿ ಯಾವುದೋ ಒಂದು ವಿಷಯದಲ್ಲಿ ಭಿನ್ನಾಭಿಪ್ರಾಯ ವುಂಟಾಯಿತು. ಇಬ್ಬರೂ ಜಗಳವಾಡಿದರು. ಸುತ್ತಲೂ ನಿಂತಿದ್ದವರು ಇದನ್ನು ಕಂಡು ಆಶ್ಚರ್ಯಚಕಿತರಾದರು.

ಹಾಗೆ ನಡೆಯುವುದೆಂದು ಯಾರೂ ಕನಸುಕಂಡಿರಲಿಲ್ಲ. ಕಿಟ್ಟಣ್ಣ ರಾಜನನ್ನು ತೆಗಳುತ್ತಿರುವುದನ್ನು ಅವರು ಬಾಯಿಬಿಟ್ಟುಕೊಂಡು ಕೇಳುತ್ತಿದ್ದರು. "ಅಯ್ಯಾ ದೊರೆ, ನಿನ್ನಲ್ಲಿ ಮಾನವೀಯತೆ ನಶಿಸಿತು. ನಿನ್ನಂತಹ ಮಹಾತ್ಮರು ಎಷ್ಟುಬೇಗ ಸತ್ತರೆ ಭೂಭಾರ ಅಷ್ಟುಬೇಗ ಕಡಿಮೆಯಾಗುತ್ತದೆ" ಎಂದು ಕಿಟ್ಟಣ್ಣ ಆವೇಶದಿಂದ ನಾಲ್ಕುಮಾತು ಆಡಿದ.

ಕಿಟ್ಟಣ್ಣ ಆರೀತಿ ಏಕೆ ಹೇಳುತ್ತಿರುವನೋ ರಾಜನಿಗೆ ತಿಳಿದಿದೆ. ಆದರೆ ಆ ಜನರು ಯಥಾರ್ಥವಿಷಯ ವನ್ನು ಅರಿತಿಲ್ಲ. ಅವರು ಕಿಟ್ಟಣ್ಣ ಆ ರೀತಿ ಕಠಿನವಾಗಿ ಮಾತನಾಡುವುದನ್ನು ಕೇಳಿ ಬೆಪ್ಪರಾಗಿದ್ದಾರೆ. ತಮ್ಮ ಕಿವಿಗಳನ್ನು ತಾವೇ ನಂಬಲಾರದಿದ್ದಾರೆ.

ತಮ್ಮ ಸುತ್ತಲೂ ಜನ ಸೇರಿರುವುದನ್ನು ಕಂಡು ಇಬ್ಬರು ಸ್ನೆಹಿತರೂ ಖಿನ್ನರಾಗಿ, ಒಬ್ಬೊರು ಒಂದೊಂದು ದಿಕ್ಕಿನಲ್ಲಿ ಸರಸರನೆ ನಡೆದುಬಿಟ್ಟರು.

ಈ ಘರ್ಷಣೆ ನಡೆದತರುವಾಯ ಎರಡು ಮೂರುದಿನ ಸ್ನೇಹಿತರಿಬ್ಬರೂ ಒಟ್ಟಾಗಿ ಓಡಾಡುತ್ತಿದ್ದುದನ್ನು ಯಾರೂ ನೋಡಲಿಲ್ಲ. ಕಿಟ್ಟಣ್ಣಮಾತ್ರ ಆಗಾಗ ಮಾರುಕಟ್ಟೆಯಲ್ಲಿ ಕಾಣಿಸುತ್ತಿದ್ದ. ರಾಜನಮುಖ ಯಾರಿಗೂ ಕಾಣಬರಲಿಲ್ಲ. ಸುತ್ತಮುತ್ತಲಿನ ಜನ ಈ ಜಗಳದ ವಿಷಯವಾಗಿ ನಾನಾರೀತಿ ಮಾತನಾಡಿಕೊಳ್ಳುತ್ತಿದ್ದರೇ ಹೊರತು ಯಾರಿಗೂ ಈ ವಿವಾದದ ಮುಃಖ್ಯಕಾರಣ ತಿಳಿಯದು.

ಈಗ ಜಗಳನಡೆದ ನಾಲ್ಕನೇದಿನ ಬೆಳಗ್ಗೆ ರಾಜನ ಮನೆಗೆ ದಿನಾ ಮುಸುರೆತೊಳೆಯುಲು ಬರುವ ದಾಸಿಯವಳು ಕಿಟಾರನೆ ಕಿರುಚಿದಳು. ಕಿಟ್ಟಣ್ಣನೊಂದಿಗೆ ಇತತರರೂ ಓಡೋಡಿ ಅಲ್ಲಿಗೆ ಬಂದರು.

ಅವರು ನೋಡಿದ್ದಾದರೂ ಏನು? ರಾಜ ಕೆಳಗೆಬಿದ್ದಿದ್ದಾನೆ. ನೆಲವೆಲ್ಲಾ ರಕ್ತಮಯ

ವಾಗಿದೆ. ಆತನ ಎದೆಯ ಮೇಲೆ ಬಾಕು ಒಂದು ಚುಚ್ಚಿಕೊಂಡಿದೆ.

ಎಲ್ಲರು ಬೆದರಿಹೋದರು. ನಡುಗಿಬಿಟ್ಟರು. ಕಿಟ್ಟಣ್ಣ ಕೂಡಲೇ ಪೋಲೀಸರಿಗೆ ವರ್ತಮಾನ ತಿಳಿಸಿದನು.

ಪೋಲೀಸಿನವರು ಬಂದು ಕೂಡಲೇ ವಿಚಾರಣೆ ನಡೆಸಿದರು. ಯಾರೂ ಬಂದು ಹೋದ ಗುರತು ಕಾಣಿಸಲಿಲ್ಲ. ಕಿಟಕಿ ಬಾಗಿಲು ತೆಗೆದಿದೆ. ಯಾರನ್ನು ಕೇಳಿದರೂ 'ನಮಗೇನು ತಿಳಿಯದು' ಎಂದು ಹೇಳಿದರು.

ಅಂದು ಕಿಟ್ಟಣ್ಣ ರಾಜ ಜಗಳವಾಡಿಕೊಂಡದ್ದನ್ನು ನೋಡಿದವರುಮಾತ್ರ ಆ ವಿಷಯವನ್ನು ಪೋಲೀಸಿನವರಿಗೆ ತಿಳಿಸಿದರು. ಪೋಲೀಸಿನವರಿಗೆ ಈ ವಿಷಯ ತಿಳಿದುಬರಲು ಅವರಿಗೆ ಕಿಟ್ಟಣ್ಣನಮೇಲೆ ಅನುಮಾನವುಂಟಾಯಿತು.

ಪ್ರಾಣಸ್ನೇಹಿತರಲ್ಲಿ ತಗಾದೆಗಳುಂಟಾದರೆ ಅವೆಷ್ಟು ಪ್ರಮಾದಕರವಾದ ರೂಪತಾಳುವುದೋ ಎಲ್ಲರಿಗೂ ತಿಳಿದ ವಿಷಯವೇ!

ಕಿಟ್ಟಣ್ಣನನ್ನು ಪ್ರಶ್ನಿಸಿದರು ಪೋಲೀಸಿನವರು. ತಮ್ಮಿಬ್ಬರಿಗೆ ಚಿಕ್ಕಂದಿನಿಂದ ಗೆಳೆತನವೆಂದೂ, ಆದರೆ ಅಂದು ಯಾವುದೋ ವಿಷಯವಾಗಿ ಜಗಳವಾಡಿಕೊಂಡಿದ್ದು ಉಂಟೆಂದೂ, ಕಿಟ್ಟಣ್ಣ ಒಪ್ಪಿಕೊಂಡ. 'ಜಗಳವೇಕೆ ಬಂತು' ಎಂದು ಕೇಳಿದರೆ ಮಾತ್ರ ಉತ್ತರ ಹೇಳಲು ಕಿಟ್ಟಣ್ಣ ಸಮ್ಮತಿಸಲಿಲ್ಲ.




ಅದರಿಂದ ಪೋಲೀಸಿನವರಿಗೆ ಕಿಟ್ಟಣ್ಣನ ಮೇಲೆ ಮತ್ತಷ್ಟು ಅನುಮಾನ ಹೆಚ್ಚಾಯಿತು. ಆದರೆ ಆತನೇ ರಾಜನನ್ನು ಹತ್ಯೆಮಾಡಿದ ನೆಂದು ರುಜುವಾತುಮಾಡಲು ಸಾಕಷ್ಟು ಕಾರಣ ಸಿಗದ ಪ್ರಯುಕ್ತ ಅರೆಸ್ಟುಮಾಡಲಾಗಲಿಲ್ಲ. ಆದರೆ ಆ ಊರೆಲ್ಲಾ ಊಹಾಪೋಹಗಳಲ್ಲಿ ತುಂಬಿಹೋಯಿತು. ನಾಳೆಯೋ ನಾಳಿದ್ದೋ ಕಿಟ್ಟಣ್ಣನನ್ನು ಅರೆಸ್ಟುಮಾಡುವರೆಂದು ಹೇಳಿಕೊಳ್ಳುತ್ತಿದ್ದರು ಜನ.

ಈ ರೀತಿ ವದಂತಿ ಹಬ್ಬಿರುವುದನ್ನು ಕಂಡು ಕಿಟ್ಟಣ್ಣ ತುಂಬಾ ನೊಂದುಕೊಂಡ.

ಹೀಗಿರಲು ಒಂದು ದಿನ ಅಲ್ಲಿಯ ಶಾಲೆಯ ಬಾಲಕರೆಲ್ಲಾ ಬೆಳದಿಂಗಳಲ್ಲಿ ಉತ್ಸಾಹದಿಂದ ದೇವಾಲಯದ ಹತ್ತಿರ ಆಡಿಕೊಳ್ಳುತ್ತಿದ್ದರು. ಕೆಲ ತುಂಟಹುಡುಗರು ಗುಡಿಯ ಗೋಪುರದ

ಮೇಲೆ ಹತ್ತಿ ಗೂಡುಗಳಲ್ಲಿ ಕೈಹಾಕುತ್ತಿದ್ದರು. ಪಾರಿವಾಳದ ಮರಿಗಳು ಬೆದರಿ ಹಾರಿ ಹೋಗುತ್ತಿತ್ತು.

ಇಷ್ಟರಲ್ಲಿ ಒಬ್ಬ ಹುಡುಗನಿಗೆ ಒಂದು ಗೂಡಿನಲ್ಲಿ ಒಂದು ಕಾಗದ ಸಿಕ್ಕಿತು. ಅವನಿಗೆ ಅದರಲ್ಲಿ ಏನೋ ಬರೆದಿರುವರೋ ಅರ್ಥವಾಗ ಲಿಲ್ಲ. ತನ್ನ ತಂದೆಹತ್ತಿರ ತೆಗೆದುಕೊಂಡು ಹೋಗಿ ತೋರಿಸಿದ. ಅದು ರಾಜ ಬರೆದ ಕಾಗದ :

ನಾನೊಂದು ದುರ್ವ್ಯಸನಕ್ಕೆಬಿದ್ದೆ. ಎಷ್ಟೇ ವಿಧವಾಗಿ ಪ್ರಯತ್ನ ಮಾಡಿದರೂ ಅದರಿಂದ ತಪ್ಪಿಸಿಕೊಳ್ಳಲಾರದೆಹೋದೆ. ನನ್ನ ಆಸ್ತಿ ಎಲ್ಲಾ ಜೂಜಿನಲ್ಲಿ ಹಾಳು ಮಾಡಿಕೊಂಡೆ. ಇದು ಯಾರಿಗೂ ತಿಳಿಯದು. ಸಾಲ ತೀರಿಸಿ ಬಿಟ್ಟರೆ ಇಂದು ನನ್ನ ಕೈಯಲ್ಲಿ ಒಂದು ಕಾಸೂ ಉಳಿಯದು. ನನ್ನ ಪ್ರಾಣ ಸ್ನೇಹಿತ ಕಿಟ್ಟಣ್ಣ ನನಗೆ ಪರಿಪರಿ ವಿಧದಲ್ಲಿ ಬುದ್ಧಿ ಹೇಳಿದ. ಕೊನೆಗೊಂದು ದಿನ ಕಠಿನವಾಗಿ ಮಾತನಾಡಿದ. ನನಗೆ ನಾಚಿಕೆಯಾಯಿತು. ಆದರೇನು ಮಾಡಲಿ? ಈ ದುಸ್ಥಿತಿಯನ್ನು ಸಹಿಸಲಾರೆ. ಆದುದರಿಂದ ಈಲೋಕವನ್ನುಬಿಟ್ಟುತೆರಳುತ್ತಿದ್ದೇನೆ. ಕಿಟ್ಟಣ್ಣ ನನ್ನನ್ನು ಕ್ಷಮಿಸುವನೆಂದು ಆಶಿಸುವೆನು.

ಈ ಕಾಗದದ ವಿಷಯ ಕ್ಷಣಮಾತ್ರದಲ್ಲಿ ಪೇಟೆಯಲ್ಲೆಲ್ಲಾ ಹರಡಿತು. ಕಾಗದ ತಂದು ಕೊಟ್ಟ ಹುಡುಗನ ತಂದೆ ಆ ಕಾಗದವನ್ನು ಪೋಲೀಸರ ವಶಕ್ಕೆ ಕೊಟ್ಟುಬಿಟ್ಟ.

ಅದು ರಾಜನ ಬರವಣಿಗೆ ಎಂದು ರುಜುವಾತಾಯಿತು. ಆತ ಆತ್ಮಹತ್ಯೆ ಮಾಡಿಕೊಂಡನೆಂದು ತಿಳಿಯಿತು.

ಕಿಟ್ಟಣ್ಣನನ್ನುಕುರಿತು ನಾವೆಲ್ಲಾ ಅನವಸರವಾಗಿ ಅನುಮಾನ ಪಟ್ಟಿದ್ದಕ್ಕಾಗಿ ಜನರೆಲ್ಲಾ ನಾಚಿಕೊಂಡರು.

ರಾಜ ಆತ್ಮಹತ್ಯೆ ಮಾಡಿಕೊಳ್ಳುವ ಮುನ್ನ ಒಂದು ಕಾಗದ ಬರೆದಿದ್ದನೆಂತಲೂ, ತರುವಾಯ ಒಂದು ಪಾರಿವಾಳ ಆ ಕಾಗದವನ್ನು ತೆಗೆದುಕೊಂಡು ಹೋಗಿ ಗುಡಿಯ ಗೂಡಿನಲ್ಲಿಟ್ಟಿರಬಹುದೆಂದು ಜನ ಊಹಿಸಿದರು.

ಈ ರೀತಿ ಒಂದು ಪಕ್ಷಿ ಬಚ್ಚಿಟ್ಟ ಕಾಗದದಿಂದ ಒಬ್ಬ ವ್ಯಕ್ತಿಯ ಪ್ರಾಣ ಉಳಿಯಿತು.



# ಹೇ ಳ ಬ ಲ್ಲಿ ರಾ ?

*

### 1. ಗಡಿಯಾರ ಹನ್ನೆರಡು ಹೊಡೆಯಿತು !

ಒಬ್ಬ ಹುಡುಗ ಅವನತಂಗಿ ಒಂದು ಗಡಿಯಾರದ ಕಂಬದ ಹತ್ತಿರನಿಂತಿದ್ದರು. ಆಗ ಗಡಿಯಾರ 6 ಹೊಡೆಯಿತು. ಆ ಹುಡುಗ ತನ್ನ ಕೈಗಡಿಯಾರ ನೋಡಿಕೊಂಡು '6 ಹೊಡೆಯಲು ಮೂವತ್ತು ಸೆಕೆಂಡು ಹಿಡಿಯಿತು' ಎಂದ. 'ಅಂದರೆ 12 ಹೊಡೆಯಲು ಎಷ್ಟುಕಾಲ ಬೇಕಾಗುತ್ತದೆ' ಎಂದು ತಂಗಿ ಕೇಳಿದಳು. '60 ಸೆಕೆಂಡು' ಎಂದ ಹುಡುಗತಕ್ಷಣ. 'ಅದುತಪ್ಪು' ಎಂದಳು ತಂಗಿ. ಅದೇಕೋ ನೀನು ಹೇಳುವೆಯಾ ?

### 2. ಹಾಲಿನ ಅಳತೆ:

ಒಬ್ಬಾಕೆ ನಾಲ್ಕು ಪಾವುಹಾಲು ತರುವಂತೆ ಕವಾಡಿಗನಿಗೆ ಹೇಳಿದಳು. ಅವನು ಎಂಟು ಪಾವು ಹಿಡಿಯುವ ಬಟ್ಟಲಲ್ಲಿ ಹಾಲುತಂದ. ಅಳೆಯಲು ಅವನಲ್ಲಿ ಬಟ್ಟಲಿಲ್ಲ. ಹಾಲುತರಹೇಳಿದಾಕೆಯ ಹತ್ತಿರ ಎರಡು ಬಟ್ಟಲುಗಳಿವೆ. ಒಂದರಲ್ಲಿ 5 ಪಾವು ಇನ್ನೊಂದರಲ್ಲಿ 3 ಪಾವು ಹಿಡಿಯುತ್ತದೆ. ಕಾವಾಡಿಗನು '4-4 ಪಾವು ಅಳೆಯುವುದುಹೇಗೆ?' ಎಂದ. ಆಗ ಮನೆಯಾಕೆಯ ಮಗನು 4 ಪಾವು ಅಳೆಯುವರೀತಿಯನ್ನು ಹಾಲಿನವನಿಗೆ ತಿಳಿಸಿದ. ಆ ಉಪಾಯವನ್ನು ನೀನು ಹೇಳಬಲ್ಲೆಯಾ ?

### 3. ಬುಟ್ಟಿಯಲ್ಲಿ ಮಾವಿನಹಣ್ಣು :

12 ಮಂದಿ ಹುಡುಗರಿದ್ದಾರೆ. ಅವರಮಧ್ಯೆ ಒಂದು ಬುಟ್ಟಿಯಲ್ಲಿ 12 ಮಾವಿನಹಣ್ಣುಗಳಿವೆ. ಒಬ್ಬೊಬ್ಬನೂ ಒಂದೊಂದು ಹಣ್ಣು ತೆಗೆದುಕೊಂಡ. ಆದರೂ ಬುಟ್ಟಿಯಲ್ಲಿ ಇನ್ನೂ ಒಂದು ಹಣ್ಣು ಉಳಿದಿದೆ. ಅದು ಹೇಗೆಉಳಿಯಿತು? ನೀನು ಹೇಳುವಿಯಾ ?

### 4. ಚೋರ: ಯಜಮಾನ

ಕಳ್ಳನೊಬ್ಬ ಹುಲ್ಲು ಲಪಟಾಯಿಸುವ ಉದ್ದೇಶದಿಂದಬಂದಿದ್ದ. ಅವನನ್ನು ನೋಡಿಬಿಟ್ಟ ಯಜಮಾನ. ಕಳ್ಳಸಹ ಯಜಮಾನನನ್ನು ನೋಡಿದ. ತಪ್ಪಿಸಿಕೊಳ್ಳಲು ಹಾದಿತೋರದೆ ಬಣಬೆಯಸುತ್ತಲೂ ಓಡಲು ಪ್ರಾರಂಭಿಸಿದ. ಅವನನ್ನು ಹಿಂಬಾಲಿಸಿದ ಯಜಮಾನ. ಇಬ್ಬರೂ ಎದುರುಬದುರಾಗಿದ್ದ ಕಡೆಯಿಂದ ಓಡಲು ಪ್ರಾರಂಭಿಸಿದರು.

ಒಂದು ಸುತ್ತುಸುತ್ತಲು ಕಳ್ಳನಿಗೆ 40 ಸೆಕೆಂಡುಗಳುಬೇಕು. ಯಜಮಾನನಿಗೆ 30 ಸೆಕೆಂಡುಗಳು ಮಾತ್ರ ಹಿಡಿಯಿತು. ಹೀಗೆ ಎಷ್ಟುಸುತ್ತು ಸುತ್ತಿದರೆ ಯಜಮಾನ ಕಳ್ಳನನ್ನು ಹಿಡಿಯಬಲ್ಲನೋ ಹೇಳುವೆಯೊ ?

# ಶಿಲಾಮುಖ

SANKAR...

ಅನೇಕ ಸಾವಿರ ವರ್ಷಗಳ ಹಿಂದೆ ಆರಾವಳಿ ಪರ್ವತಪ್ರಾಂತದ ಒಂದು ಬೆಟ್ಟದಲ್ಲಿ ಯಾರೋ ಮಹಾಶಿಲ್ಪಿ ಕೆತ್ತಿದಂತೆ ತೋರುತ್ತಿದ್ದ ಒಂದು ಮಾನವ ಮುಖದ ಆಕೃತಿಯಿತ್ತು. ನಿಜ ಹೇಳಬೇಕಾದರೆ ಆ ಆಕೃತಿಯನ್ನು ಯಾವ ಶಿಲ್ಪಿಯೂ ಕೆತ್ತಿರಲಿಲ್ಲ. ಪ್ರಕೃತಿಸಿದ್ಧವಾಗಿತ್ತು. ಸುತ್ತಮುತ್ತಲಿರುವ ಹಲವಾರು ಊರುಗಳವರಿಗೆ ಪ್ರತಿ ದಿವಸವೂ ಆ ಶಿಲಾಮುಖ ಕಾಣಿಸುತಲಿತ್ತು.

ಅದರಲ್ಲವರು ಔದಾರ್ಯ, ಕರುಣೆ, ಶಾಂತಿ, ದಯೆ ಮುಂತಾದ ಉದಾತ್ತ ಭಾವಗಳನ್ನು ಕಾಣುತ್ತಿದ್ದರು. ಆ ಮುಖದ ಹಣೆ ವಿಶಾಲವಾಗಿದ್ದು ತಿಳುವಳಿಕೆಯನ್ನು ಸೂಚಿಸುತ್ತಲಿತ್ತು. ಕಣ್ಣುಗಳು ಜನರಕಡೆ ದಯಾದೃಷ್ಟಿಯಿಂದ ಅಮಿತವಾತ್ಸಲ್ಯದಿಂದ ನೋಡುತ್ತಿರುವಂತೆ ಭಾಸವಾಗುತಲಿತ್ತು. ಯಾವನೊ ಒಬ್ಬ ಮಹಾತ್ಮನ ಮುಖದಂತೆ ಕಾಣುತ್ತಿತ್ತು. ಈ ಶಿಲಾಮುಖವನ್ನು ಕುರಿತು ಅನೇಕ ಬಗೆಯಾಗಿ ಜನರು ಕತೆಗಳನ್ನು ಹೇಳಲಾರಂಭಿಸಿದ್ದರು. ಅದನ್ನು ಹೋಲುವಂತಹ ಮುಖಭಾವ ಹೊಂದಿದ ಮಹನೀಯನೊಬ್ಬಾತ ಹಿಂದಿನ ಕಾಲದಲ್ಲಿದ್ದನು. ಆತನ ದಯೆಯಿಂದ ಪ್ರಜೆಗಳು ಬಹಳ ಸುಖವನ್ನು ಅನುಭವಿಸಿದರು. ಎಂದು ಕೆಲವರು ಹೇಳುತ್ತಿದ್ದರು.

ಕೆಲಕಾಲಕ್ಕೆ ಹಿಂದೆ ಆ ಪ್ರಾಂತಕ್ಕೆ ಒಬ್ಬ ಮುನೀಶ್ವರ ಬಂದ. ಸುತ್ತುಮುತ್ತಲಿನ ಸಾವಿರಾರು ಮಂದಿ ಆ ಮುನಿಯನ್ನು ನೋಡಲು ಹೋದರು. ಅವರಲ್ಲಿ ಕೆಲವರು ಮುನೀಶ್ವರನನ್ನು ಶಿಲಾಮುಖದ ಸಂಗತಿ ಕೇಳಿದರು.

ಮುನೀಶ್ವರನು ಸ್ವಲ್ಪಹೊತ್ತು ಶಿಲಾಮುಖವನ್ನೇ ನೋಡುತ್ತಿದ್ದು "ಅದನ್ನು ಹೋಲುವ ಮುಖ ಭಾವಗಳನ್ನುಳ್ಳಾತ ಈ ಪ್ರಾಂತದಲ್ಲಿ ಸದ್ಯದಲ್ಲೇ ಕಾಣಿಸಿಕೊಳ್ಳುವನು. ಆತನು ತುಂಬಾ ಜ್ಞಾನಿ, ಮಹಾತ್ಮ. ಆತನಿಂದ ಪ್ರಜೆಗಳಿಗೆ ತುಂಬಾ ಉಪಕಾರವಾಗುತ್ತದೆ" ಎಂದ.

ಅಂದಿನಿಂದ ಜನ ಆ ಸುತ್ತಮುತ್ತಲಿನ ಗ್ರಾಮುಗಳಿಗೆ ಬಂದ ಹೊಸಬರ ಮುಖಗಳನ್ನು ಪರಿಶೀಲನಾ ದೃಷ್ಟಿಯಿಂದ ನೋಡಲಾರಂಭಿ

ಜಿ. ವೀರಭದ್ರಪ್ಪ, ಹೊಸಪೇಟೆ




ಷಿದರು. ಶಿಲಾ ಮುಖಭಾವವನ್ನು ಹೋಲುವವರೊಬ್ಬರಾದರೂ ಅಲ್ಲಿಗೆ ಬರಲಿಲ್ಲ.

ಈ ರೀತಿ ಅನೇಕ ಶತಮಾನಗಳು ಕಳೆದು ಹೋದುವು. ಮುನೀಶ್ವರನು ಹೇಳಿದ ವೃತ್ತಾಂತವನ್ನು ಒಂದು ತಲೆಮಾರಿನವರು ಕಟ್ಟುಕತೆಯೋಪಾದಿಯಲ್ಲಿ ಹೇಳತೊಡಗಿದರು. ಅನೇಕರಿಗೆ ಆ ಕತೆಯಲ್ಲಿ ನಂಬುಗೆಯಿಲ್ಲದಂತಾಯಿತು.

ವಿಶ್ವಾಸಿಗಳ ಪೈಕಿ ಒಬ್ಬ ಹುಡುಗನಿದ್ದ. ಅವನ ಹೆಸರು ವಾಸು. ವಾಸು ಮಗುವಾಗಿದ್ದಾಗ ನಿತ್ಯವೂ ಅವನ ತಾತನು ಮಡಲಲ್ಲಿ ಕುಳ್ಳಿರಿಸಿಕೊಂಡು ಶಿಲಾಗೊಂಬೆಯನ್ನು ತೋರಿಸುತ್ತಾ ಮೊಮ್ಮಗನಿಗೆ ಕತೆ ಹೇಳುತ್ತಿದ್ದ.

ಅನೇಕ ವರ್ಷಗಳಕಾಲ ಪ್ರತಿನಿತ್ಯವೂ ಈ ವಿಷಯ ಕೇಳಿದ್ದರಿಂದ ಅದು ಮನದಲ್ಲಿ ಚೆನ್ನಾಗಿ ನೆಲೆಸಿತು. ಮುನೀಶ್ವರನ ಜೋತಿಷ್ಯ ತನ್ನ ಜೀವಮಾನದಲ್ಲೇ ಫಲಿಸುವುದೆಂದು ಒಂದು ವಿಧವಾದ ದೃಢವಿಶ್ವಾಸವಿತ್ತು ವಾಸುವಿನಲ್ಲಿ!

ಹೀಗಿರಲು ವಾಸು ನೆಲೆಸಿದ್ದ ಗ್ರಾಮಕ್ಕೆ ಒಂದು ದಿನ ಮಹಾಜ್ಞಾನಿಯಾದ ಸನ್ಯಾಸಿಯೊಬ್ಬ ಬಂದ. ಆತನು ವೇದಗಳನ್ನು, ಉಪನಿಷತ್ತುಗಳನ್ನು ಚೆನ್ನಾಗಿ ಅರಿತುಸುರಿತು ತರ್ಕವ್ಯಾಕರಣಾದಿ ಶಾಸ್ತ್ರಗಳಲ್ಲಿ ಗಟ್ಟಿಗನೆನ್ನಿಸಿಕೊಂಡಿದ್ದನು. ಆತನಮುಖದಲ್ಲಿ ವಿದ್ವತ್ತು ಪ್ರಕಾಶಿಸುತ್ತಿತ್ತು ಅಂತಹ ಮಹಾತ್ಮನ ಬರುವಿಕೆಯಿಂದ ಜನರಿಗೆ ಮೇಲ್ಮೆ ಯುಂಟಾಗುವುದೆಂದು, ಆತನಮೂಲಕ ಮುನೀಶ್ವರನ ವಾಣಿ ಫಲಿಸಬಹುದೆಂದು ವಾಸು ಸನ್ಯಾಸಿಯನ್ನು ನೋಡಲು ಹೋದ. ಈ ಸನ್ಯಾಸಿಯ ಮುಖಕ್ಕೂ ಶಿಲಾಮುಖಕ್ಕೂ ಹೋಲಿಕೆಯಿರಲಿಲ್ಲ.

ಅದರೂ ನಿರಾಶನಾಗದೆ ವಾಸು ಆತ ಹೇಳುತ್ತಿದ್ದ ಗಹನವಾದ ವಿಚಾರಗಳನ್ನೆಲ್ಲಾ ಕೇಳುವನು. ಆದರೂ ಸನ್ಯಾಸಿಗೆ ಪ್ರಜೆಗಳ ಜೀವನ, ಅವರ ಕಷ್ಟಸುಖಗಳು ಸ್ವಲ್ಪವೂ ತಿಳಿಯದು. ಸಾಧಾರಣ ಕುಟುಂಬದಲ್ಲಿ ಹುಟ್ಟಿ ಜನಗಳಮಧ್ಯೆ ವ್ಯವಹರಿಸುತ್ತಿದ್ದ ವಾಸುವಿಗೆ ಈ ಸಂಗತಿ ಬಹುಬೇಗ ಅರ್ಥವಾಯಿತು. ಅದೂ ಅಲ್ಲದೆ ಈ ಸನ್ಯಾಸಿ ಶೀಘ್ರಕೋಪಿ.




ಆತನು ಉಪದೇಶಿಸುತ್ತಿರುವಾಗ ಯಾರೂ ಸೀನಬಾರದು, ಕೆಮ್ಮಲೂ ಬಾರದು. ಅಷ್ಟು ಗಹನವಿಷಯ ಕೇಳುತ್ತಿರುವಾಗ ಜನರಿಗೆ ಧರ್ಮಸಂದೇಹವುಂಟಾಗುವುದಿಲ್ಲವೇ?

ಸಂದೇಹ ವುಂಟಾದರೆ ನಿವಾರಣಗೆ ಪ್ರಶ್ನೆ ಕೇಳಬಾರದು. "ನಿಮ್ಮ ಕರ್ಮ! ಯೋಗ್ಯತೆ ಯುಳ್ಳವರು ಅರ್ಥಮಾಡಿಕೊಳ್ಳಿ; ಇಲ್ಲದಿರುವವರು ಬಾಯಿ ಮುಚ್ಚಿಕೊಂಡು ಸುಮ್ಮನಿರಿ" ಎಂದೆನ್ನುತ್ತಿದ್ದ.

ಅದರಿಂದಾಗಿ ಸನ್ಯಾಸಿಯಲ್ಲಿ ಪ್ರಜೆಗಳಿಗೆ ಭಕ್ತಿ ಕಡಿಮೆ ಆಯಿತು. ಕೆಲದಿನಗಳನಂತರ ಸನ್ಯಾಸಿ ಹೊರಟುಹೋದ. ತನ್ನ ಆಸೆ ಫಲಿಸದಿದ್ದುದಕ್ಕೆ ವಾಸು ನಿರಾಶೆಗೊಂಡ.

ಸ್ವಲ್ಪಕಾಲ ಕಳೆಯಿತು.

ಆ ಪ್ರಾಂತ್ಯಕ್ಕೆ ಮಹಾಶೂರನಾದ ಪರಾಕ್ರಮಿಯೊಬ್ಬಾತ ಬಂದ. ಆತ ಅನೇಕ ಯುದ್ಧಗಳಲ್ಲಿ ಜಯ ಪಡೆದ ವೀರಾಗ್ರಣಿ. ಆತನಿರುವ ಕಡೆ ಜನರಿಗೆ ಶತ್ರುಭೀತಿ ಯಿಲ್ಲ. ಜನರು ಎದೆಯಮೇಲೆ ಕೈ ಜೋಡಿಸಿಕೊಂಡು ಹಾಯಾಗಿ ನಿದ್ದೆಮಾಡ ಬಹುದೆಂದು ಭಾವಿಸಿದ್ದರು.

ಮುನೀಶ್ವರನು ಹೇಳಿದ ವ್ಯಕ್ತಿ ಈತನೇ ಆಗಿರಬಹುದೆಂದು ವಾಸು ಹೋಗಿ ನೋಡಿದ. ವೀರನ ಮುಖ ಶಿಲಾಮುಖವನ್ನು ಹೋಲುವಂತಿರಲಿಲ್ಲ.

ಈ ವೀರನೂ ಸಹ ಪ್ರಜೆಗಳ ಕಷ್ಟಸುಖಗಳನ್ನು ಅರಿತವನಲ್ಲ. ಅವರ ಯೋಗಕ್ಷೇಮದಲ್ಲಿ ಆಸಕ್ತಿ ಹೊಂದಿರಲಿಲ್ಲ. ಹೊತ್ತು ಗೊತ್ತು ಯಿಲ್ಲದ ಅವೇಳೆಯಲ್ಲಿ ಕರೆಯಿಸಿ ತಮ್ಮತಮ್ಮ ಕೆಲಸಕಾರ್ಯಗಳಲ್ಲಿದ್ದವರ ಕೆಲಸಗಳನ್ನೆಲ್ಲಾ ಕೆಡಿಸುತ್ತಿದ್ದ. ತನ್ನ ಮಾತು ಕೇಳದವರನ್ನು ಹಿಂಸೆ ಮಾಡುತ್ತಿದ್ದ. ಮಹಾವೀರನು ತನ್ನಲ್ಲಿ ಭಕ್ತಿ ವಿಶ್ವಾಸಗಳನ್ನು ವ್ಯಕ್ತಪಡಿಸುವವರನ್ನೆಲ್ಲಾ ಪಶುಗಳಿಗಿಂತ ಹೀನವಾಗಿ ಕಾಣುತ್ತಿದ್ದ. ಕ್ರಮೇಣ ಪ್ರಜೆಗಳಿಗೆ ಆತನಲ್ಲೂ ಗೌರವ ಕುಂದಿಹೋಯಿತು.

ಕೆಲಕಾಲದ ನಂತರ ಆತನು ಬೇರೊಂದು ಪ್ರಾಂತ್ಯಕ್ಕೆ ಹೊರಟುಹೋದ. ವಾಸು ಮತ್ತೊಂದು ಸಾರಿ ನಿಟ್ಟುಸಿರಿಟ್ಟ.

ಹೀಗೆ ಕಾಲಚಕ್ರ ಉರುಳಿತು. ಆ ಪ್ರಾಂತಕ್ಕೆ ವ್ಯಾಸಾರ ಶ್ರೇಷ್ಠನಾದವನು ಬರುವ ಸುದ್ದಿ ಹರಡಿತು.

ಈತನು ಸಮುದ್ರದ ಮೇಲೆ ಹಡಗುಗಳನ್ನು ದೂರ ದೇಶಗಳಿಗೆ ಕಳುಹಿಸಿ ವ್ಯಾಪಾರ ಮಾಡಿ ಕೋಟಿಗಟ್ಟಲೆ ಸಂಪಾದಿಸಿದನೆಂಬ ಪ್ರತೀತಿಯಿತ್ತು. ಆತ ಎರಡು ದಿವಸ ತಂಗಿದರೂ ಅಲ್ಲಿ ಭೋಗ ಭಾಗ್ಯ, ಸಿರಿಸಂಪತ್ತುಗಳು ತಾಂಡವವಾಡುವುದಂತೆ!

ಇಲ್ಲಿನವರೆಲ್ಲ ಕಷ್ಟಜೀವಿಗಳು; ತಮ್ಮ ಗ್ರಾಮಗಳಲ್ಲಿ ಸಿರಿಸಂಪತ್ತುಗಳಿಗೆ ಕೊರತೆಯೆಂಬುದನ್ನು ವಾಸು ಬಲ್ಲ. ಈತನು ತಮ್ಮ ಜನರನ್ನೆಲ್ಲಾ ಉದ್ಧಾರ ಮಾಡಲು ಬರುವನೆಂದೂ, ಆತನ ಮುಖ ಶಿಲಾ ಮುಖವನ್ನು ಹೋಲಬಹುದೆಂದೂ ವಾಸು ಕಡು ಆಶೆಯಿಂದಿದ್ದ.

ಸೂಕ್ಷ್ಮವಾಗಿ ಪರಿಶೀಲಿಸಿ ನೋಡಲು ವರ್ತಕನ ಮುಖ ಬೇರೆ ರೀತಿಯದಾಗಿತ್ತು. ಆದರೂ ಆತನ ಬರುವಿಕೆಯಿಂದ ಸಿರಿಸಂಪತ್ತುಗಳು ಹೆಚ್ಚುವಂತೆ ತೋರಿತು.

ಆತ ಗದ್ದೆಗಳಲ್ಲಿ ಹೊಸದಾಗಿ ಪೈರು ಹಾಕಿಸಿದ. ಆ ಬೆಳೆಗಳನ್ನೆಲ್ಲಾ ತಾನೇ ತಂದುಕೊಂಡ. ರೈತರಿಗೆ ಹೆಚ್ಚು ಲಾಭ ಬಂದಿತು. ಪ್ರತಿಯೊಬ್ಬರಲ್ಲೂ ಹಣ ಹೆಚ್ಚು ಹೆಚ್ಚಾಗಿ ಓಡಾಡಲಾರಂಭಿಸಿತು. ಕಸಬುದಾರರಲ್ಲೂ, ಅವರು ಮೊದಲು ಕಂಡರಿಯದ ಹೊಸ ಉದ್ಯಮಗಳನ್ನು ಕೋಟ್ಯಾಧೀಶ್ವರನು ಪ್ರೋತ್ಸಾಹಿಸಿದನು.

ಒಂದೆರಡು ವರ್ಷಗಳ ನಂತರ ಕೋಟ್ಯಾಧೀಶ್ವರನು ಹೊಸ ಬೆಳೆಗಳ ದರವನ್ನು ಇಳಿಸಿದ. ಹೊಸ ಪದಾರ್ಥಗಳ ಬೆಲೆಗಳನ್ನು




ಕಡಮೆ ಮಾಡಿದ. ಆ ಪದಾರ್ಥಗಳ ಬೆಲೆಗಳನ್ನೂ ಕಡಮೆ ಮಾಡಿದ. ಆ ಬೆಳೆಗಳು ಪ್ರಜೆಗಳಿಗೆ ಉಪಯುಕ್ತವಾದುವುಗಳು ಅಲ್ಲಿಲ್ಲವಾದುದರಿಂದ ಕಡಿಮೆ ಮಾಡಿದ. ಆ ಬೆಳೆಗಳು, ಪದಾರ್ಥಗಳು ಪ್ರಜೆಗಳಿಗೆ ಉಪಯುಕ್ತವಾದುವುಗಳಲ್ಲವಾದುದರಿಂದ ಕೋಟ್ಯಾಧೀಶ್ವರನು ಹೇಳಿದ ಧಾರಣೆಗೆ ಒಪ್ಪಿಕೊಳ್ಳಬೇಕಾಯಿತು. ಇಲ್ಲವಾದರೆ ಕೊಳ್ಳುವ ಗಿರಾಕಿಯೇ ಇಲ್ಲ.

ಅಷ್ಟೇ ಅಲ್ಲದೆ ಪ್ರಜೆಗಳು ತಿನ್ನುವ ಆಹಾರ ಪದಾರ್ಥಗಳು, ನಿತ್ಯ ಬಳಸುವ ಸಾಮಾನುಗಳ ಕೊರತೆ ತಲೆಗೇರಿತು. ಅವುಗಳ ಬೆಲೆ ಅಧಿಕವಾಯಿತು. ಜನ ಜೀವನದಲ್ಲಿ ಸಂಕ್ಷೋಭೆ ಕಾಣಿಸಿತು. ಅಲ್ಲಿಯತನಕ ಸೌಖ್ಯದಿಂದಿದ್ದ




ಕೆಲವರು ನಿರ್ಗತಿಕರಾದರು. ಅನ್ನ ಬಟ್ಟೆಗಳ ಕ್ಷಾಮವುಂಟಾಯಿತು.

ಕೋಟೀಶ್ವರನು ತನಗೆ ಬೇಕಾದ ಸರ[illegible]ನ್ನೆಲ್ಲಾ ಚೀಲಗಳಲ್ಲಿ ಜಮಾಯಿಸಿ, ಅವನ್ನು ಗಾಡಿಯಲ್ಲಿ ಹೇರಿಕೊಂಡು ಬಂದದಾರಿ ಹಿಡಿದು ಹೊರಟ. ಇದನ್ನೆಲ್ಲಾ ಕಂಡ ವಾಸುವಿಗೆ ಪ್ರಜೆಗಳ ದುಸ್ಥಿತಿ ಸಹಿಸಲಾರದೆ ದುಃಖವುಂಟಾಯಿತು. ಅವನ ವಯಸ್ಸಿನೊಂದಿಗೆ ಬುದ್ಧಿಯೂ ವೃದ್ಧಿ ಆಯಿತು.

ಹಾಗೇ ಮತ್ತಷ್ಟುಕಾಲ ಕಳೆಯಿತು.

ಆ ಪ್ರಾಂತ್ಯಕ್ಕೆ ಮಹಾಕವಿಯೊಬ್ಬ ಬಂದ. ಆ ಕವಿ ಸಾಮಾನ್ಯ ಜನರ ಜೀವನವನ್ನು ತಿಳಿದಂತಹವನು. ಅಂತಹವರನ್ನು ಕುರಿತು ಕವನಗಳನ್ನು ರಚಿಸುತ್ತಿದ್ದ. ಆತನ ಕವನಗಳಿಗೆ ದೇಶವಿದೇಶಗಳಲ್ಲಿ ಕೀರ್ತಿ ದೊರೆಯಿತು. "ಈ ಕವಿಯ ಮುಖ ಶಿಲಾಮುಖವನ್ನು ಹೋಲುವುದು. ಮಹಾಮುನಿಯ ಮಾತು ವ್ಯರ್ಥವಾಗುವುದಿಲ್ಲ" ಎಂದುಕೊಂಡ ವಾಸು.

ಕವಿ ಬಂದ. ಅವನ ಮುಖದಲ್ಲಿ ಶಿಲಾಮುಖದ ಲಕ್ಷಣಗಳಿಲ್ಲ. ಕವಿ ಹಾಡಿದ. ಜನ ಆತನನ್ನು ಸುತ್ತುಗಟ್ಟಿ ಕವನಗಳನ್ನು ಕೇಳಿ ತನ್ಮಯರಾಗುತ್ತಿದ್ದರು.

ಆತನಿಗೆ ಎಲ್ಲ ಉಪಚಾರಗಳನ್ನೂ ಮಾಡತೊಡಗಿದರು. ಆದರೂ ಕವಿಗೆ ಪ್ರಜೆಗಳಲ್ಲಿ ನಿಜವಾದ ಔದಾರ್ಯವಿರಲಿಲ್ಲ. ವಾಸ್ತವ ಸಹಾನುಭೂತಿಯಿರಲಿಲ್ಲ.

ಆತ ತನ್ನ ಕವನಗಳಲ್ಲಿ ಪ್ರಜೆಗಳ ಕೃಷಿಯನ್ನು ಕೀರ್ತಿಸುತ್ತಿದ್ದನೇ ಹೊರತು ನಿಜವಾಗಿ ಕೃಷಿಕರನ್ನು ಕಂಡರೆ ಗೌರವವಿರಲಿಲ್ಲ. ಕೆಲಸ ಕಾರ್ಯವಿಲ್ಲದವರು ಅಪಾರ ಹಣವುಳ್ಳವರೊಂದಿಗೆ ಅನ್ಯೋನ್ಯದಿಂದಿರುವನು. ಶ್ರಮಜೀವಿಗಳನ್ನು ದೂರವಿರಿಸುತ್ತಿದ್ದ. ಅವರ ಮನೆಗಳಿಗೆ ಹೋಗುತ್ತಿರಲಿಲ್ಲ. ಅವರ ಕಷ್ಟಸುಖಗಳನ್ನು ಶ್ರದ್ಧೆಯಿಂದ ವಿಚಾರಿಸುತ್ತಿರಲಿಲ್ಲ. ಆಪತ್ತಿನಲ್ಲಿರುವವರಿಗೆ ಸಹಾಯ ಮಾಡುತ್ತಿರಲಿಲ್ಲ.

"ಈ ಕವಿ ವಂಚಕನು. ಅವನು ತನ್ನ ವರ್ತನೆಯಿಂದಲ್ಲವಾದರೂ ಕವನಗಳಿಂದ ಪ್ರಜೆಗಳನ್ನು ಮೋಸಗೊಳಿಸುತ್ತಿರುವನು. ಅವನ ನಡತೆಗಳು ವಾಸ್ತವವಾದುದು; ಕವನಗಳು ಅಸತ್ಯವಾದವುಗಳು; ಅವುಗಳಲ್ಲಿ ಎಷ್ಟು

ಯಥಾರ್ಥಗಳಿದ್ದರೇನುಫಲ?" ಎಂದುಕೊಂಡ ವಾಸು.

ಕವಿಯ ಗುಣಗಳನ್ನರಿತ ಪ್ರಜೆಗಳು ಆತನಿಗೆ ಗೌರವ ಕೊಡುವುದನ್ನು ನಿಲ್ಲಿಸಿಬಿಟ್ಟರು. ಸ್ವಲ್ಪ ದಿನಗಳ ನಂತರ ಆ ಕವಿ ಎಲ್ಲಿಗೋ ಹೊರಟುಬಿಟ್ಟ.

ವಿಚಾರ ಭರಿತನಾದ ವಾಸು ವಿಗ್ರಹದ ಕಡೆಯೇ ನೋಡುತ್ತಾ ನಿಂತುಕೊಂಡಿದ್ದ. ತನಗೆ ತಾತನು ಹೇಳಿದ ಮುನೀಶ್ವರನ ಮಾತುಗಳಲ್ಲಿ ನಂಬಿಕೆ ಕಡಿಮೆಯಾಯಿತು.

ತಾನು ನೋಡುತ್ತಿರುವಂತೆಯೇ ಅನೇಕ ಮಹನೀಯರು ಬಂದರು; ಹೋದರು.

ಒಬ್ಬರ ಮುಖದಲ್ಲೂ ಆ ವಿಗ್ರಹದಲ್ಲಿರುವ ಔದಾರ್ಯ, ದಯೆ, ಕರುಣೆ, ವಾತ್ಸಲ್ಯ ತೋರಿಬರಲಿಲ್ಲ. ಆದುದರಿಂದಲೇ ಅವರು ಯಾರೂ ಪ್ರಜೆಗಳಿಗೆ ಲೇಶಮಾತ್ರವೂ ಉಪಕಾರ ಮಾಡಲಿಲ್ಲ.

ವಾಸು ಈ ರೀತಿಯಾಗಿ ಆಲೋಚಿಸುತ್ತಾ ನಿಂತಿರುವಾಗ ಆ ದಾರಿಯಲ್ಲಿ ಬಂದ ಕೆಲವರು ಆ ವಿಗ್ರವನ್ನು ನೋಡಿ ವಾಸುವಿನ ಮುಖವನ್ನೂ ಕಣ್ಣರಳಿಸಿ ನೋಡಿದರು. ಏನಾಶ್ಚರ್ಯ! ವಾಸುವಿನ ಮುಖ ಅರ್ಥಾತ್ ಶಿಲಾಮುಖವನ್ನು ಹೋಲುತ್ತಿದೆ.

ಈ ಸುದ್ದಿ ಕ್ಷಣಮಾತ್ರದಲ್ಲಿ ಸುತ್ತಮುತ್ತ ಹಳ್ಳಿಗಳಲ್ಲೆಲ್ಲಾ ಹರಡಿತು.

ಶಿಲಾಮುಖವನ್ನು ಕುರಿತು, ಅದರ ಲಕ್ಷಣಗಳನ್ನು ಕುರಿತು ಪೂರ್ವಿಕರು ಹೇಳಿದ ಕತೆಗಳನ್ನು ಮರೆತಿದ್ದವರೆಲ್ಲ ವಾಸು ಬಳಿಗೆ ಬಂದು ಆ ಎರಡು ಮುಖಗಳಲ್ಲಿನ ಏಕೀಭವವನ್ನು ಕಂಡು ಆಶ್ಚರ್ಯಪಟ್ಟರು.

ಮುನೀಶ್ವರನ ಅಮೋಘವಾಣಿ ಫಲಿಸಿತು. ವಾಸು ತಾನು ಅನೇಕಮಂದಿ ಮಹನೀಯರಿಂದ ತಿಳಿದ ವಿಷಯಗಳನ್ನು ತನ್ನ ಪ್ರಜೆಗಳಿಗೆ ಪ್ರಯೋಜನವಾಗುವಂತೆ ಮಾಡಿ, ಪ್ರಜೆಗಳ ಕಷ್ಟಸುಖಗಳನ್ನು ಹಂಚಿಕೊಂಡು ಅವರಿಗೆ ಐಶ್ವರ್ಯ, ಆನಂದ ಕೈಗೂಡುವಂತೆ ಮಾಡಿ ಧನ್ಯಜೀವಿಯಾದ. ಅವನ ಕೀರ್ತಿಯೂ ಶಿಲಾಮುಖದಂತೆಯೇ ಅಮರವಾಯಿತು



# ಶು ಭೋ ದ ಯ



ಶುಭವಾಗುತ್ತಿದೇ! ಶುಭವಾಗುತ್ತಿದೇ!
ಶುಭೋ—ದಯವಾಗುತ್ತಿದೇ !!

ವಿಜಯ ಸಂವತ್ಸರದ
ಯುಗಾದಿ ಹಬ್ಬದಾ
ಶುಭೋ—ದಯವಾಗುತ್ತಿದೇ !!

ಕೋಳಿ ಕತ್ತೆತ್ತಿ 'ಕೋಕೋ' ಕೂಗಿತು!
ಕಾಗೆ ಹಾರಾಡಿ 'ಕಾಕಾ' ಕೂಗಿತು!
ಹಕ್ಕಿಗಳ ಗುಂಪು 'ಚಿಲಬಿಲ' ಹಾಡಿತು!
ಹಸುವು ಕರುವಿಗೆ ತುಂಬ ಹಾಲೂಡಿತು!
ಹಸುಕಂದರೆಲ್ಲ ಹೊಸ
ಉತ್ಸಾಹ ತಾಳುತೇ—
ಶುಭೋ—ದಯವಾಗುತ್ತಿದೇ !!

ಅಂಗಿಯೋ ವಸ್ತ್ರವೋ
ದುಡ್ಡು ದುಗ್ಗಾಣಿಯೋ
ಅಂಗಳದಿ ಬೇಡುವಗೆ
ದಾನ ಧರ್ಮವಮಾಡಿ
ದೀನರಾ ನಲ್ಮೆಯನು ಪಡೆಯಿರಯ್ಯಾ!
ದೀನಬಾಂಧವರಾಗಿ ಬಾಳಿರಯ್ಯಾ!
ದೇವರಿಗೆ-ಹಿರಿಯರಿಗೆ ತಲೆವಾಗಿರಯ್ಯಾ!
ಶುಭೋ—ದಯವಾಗುತ್ತಿದೇ !!

ಬೆಳಗಾತ ಬೇಗೆದ್ದು
ಶುಭ ದರುಶನವಮಾಡಿ
ಶ್ರದ್ಧೆಯುಳ್ಳವರಾಗಿರೀ, ಓದಿರೀ!
ಶುಭ್ರರಾಗೀ ತುಂಬ ಚುರುಕಾಗಿರೀ!

ಓದುವಾಗಲೆ ಓದಿ
ಆಡುವಾಗಲೆ ಆಡಿ
ತಿನ್ನುವಾಗಲೆ ತಿನ್ನಿ
ಮಲಗುವಾಗಲೆ ಮಲಗಿ,
ತಂದೆಯೂ ತಾಯಿಯೂ
ಗುರುವು ಹೇಳಿದ ಮಾತು
ಕೇಳಿರೀ, ಅವರಡಿಗೆ
ಬೀಳಿರೀ, ಬಾಳಿರೀ!
ಶುಭೋ—ದಯವಾಗುತ್ತಿದೇ !!

ಒಳ್ಳೆಯವರನುಕೂಡಿ
ಒಳ್ಳೆ ಕೆಲಸವ ಮಾಡಿ
ಮಾತು ಕಡಮೆಯ ಮಾಡಿ
ಗೈಮೆ ಹೆಚ್ಚಿಗೆ ಮಾಡಿ
ಸತ್ಯವನೆ ಮಾತಾಡಿ
ಶುಭವಾಗುತಯಿದೇ—
ಶುಭೋ—ದಯವಾಗುತ್ತಿದೇ !!

"ನವಗಿರಿನಂದ"




# ನೆಲದಮೇಲೆ ಉದುರಿದ ಹಣ್ಣು

ಒಂದು ಅಡವಿಯ ಹತ್ತಿರ ಐದು ಎಕರೆ ಜಮೀನಿನಲ್ಲಿ ತೋಟ ನೋಡಿಕೊಳ್ಳುತ್ತಾ ವೀರಯ್ಯ ಕಾಲಕ್ಷೇಪಮಾಡುತ್ತಿದ್ದ. ಹೆಂಡತಿ ಪಿಳ್ಳಮ್ಮನೊಂದಿಗೆ ತೋಟದಲ್ಲೇ ವಾಸಮಾಡುವನು. ಆಕೆ ಗಂಡನಿಗೆ ತುಂಬಾ ಸಹಾಯ ಮಾಡುತ್ತಿದ್ದಳು.

ಆ ತೋಟ ವೀರಯ್ಯನದಲ್ಲ. ಅಲ್ಲಿಗೆ ನಾಲ್ಕು ಮೈಲಿದೂರದಲ್ಲಿದ್ದ ಒಬ್ಬ ಸಾಹುಕಾರ ಅದರ ಒಡೆಯ.

ಅದರಲ್ಲಿ ಬಗೆಬಗೆಯ ಗಿಡಗಳಿದ್ದವು. ಯಾವಾಗಲೂ ಯಾವುದೋ ಒಂದು ಬಗೆಯ ಹಣ್ಣು ಇರುತ್ತಿತ್ತು. ಗಿಡಗಳಲ್ಲಿರುವ ಹಣ್ಣುಗಳನ್ನು ವೀರಯ್ಯ ಮುಟ್ಟಬಾರದೆಂಬ ಷರತ್ತು ವಿಧಿಸಲಾಗಿತ್ತು. ಗಾಳಿಗೆ ಕೆಳಗೆ ಉದುರಿದ ಹಣ್ಣುಗಳ ಹಕ್ಕು ಮಾತ್ರವೇ ವೀರಯ್ಯನದು. ಹಾಗೆ ಉದುರಿದ ಹಣ್ಣುಗಳನ್ನು ವೀರಯ್ಯನು ಮಾರಿಕೊಳ್ಳಬಹುದು. ನಾಲ್ಕು ವರ್ಷಗಳ ಹಿಂದೆ ಮಳೆ ಗಾಳಿ ಬಂದು ತೋಟದಲ್ಲಿದ್ದ ಹಣ್ಣುಗಳೆಲ್ಲಾ ಉದುರಿಸಿತು. ಆ ವರ್ಷ ವೀರಯ್ಯನಿಗೆ ತುಂಬಾ ಲಾಭ ಬಂತು.

ಆದರೆ ಪ್ರತಿವರ್ಷವೂ ಗಾಳಿಮಳೆ ಬರುವುದಿಲ್ಲವಲ್ಲ! ಅನ್ನಕ್ಕೆ ಸಾಕಾಗುವಷ್ಟು ಆದಾಯ ಬರುವುದೇ ಬಹಳ ಕಷ್ಟವಾಯಿತು. ಆದುದರಿಂದ ಪಕ್ಕದ ಅಡವಿಯಲ್ಲಿ ಸೌದೆ ಸೀಳಿ, ಅದನ್ನು ಮಾರಿ ಜೀವನಯಾತ್ರೆ ಸಾಗಿಸುತ್ತಿದ್ದನು.

ಗಂಡ ಸೌದೆಗಾಗಿ ಅರಣ್ಯಕ್ಕೆ ಹೋದಾಗ ಪಿಳ್ಳಮ್ಮ ತೋಟದ ಕೆಲಸ ಮಾಡುತ್ತಿದ್ದಳು.

ಸುತ್ತಲೂ ಪೌಳಿ, ಮಧ್ಯಭಾಗದಲ್ಲಿ ವೀರಯ್ಯನ ಗುಡಿಸಲು. ಅದಕ್ಕೆ ಹೊಂದಿಕೊಂಡಂತೆ ಹುಲ್ಲುಬಣಬೆ. ಎರಡು ಎತ್ತುಗಳ

ಸಿ. ಮಹಾಲಕ್ಷ್ಮಿ, ಮೈಸೂರು




ಸಹಾಯದಿಂದ ಆತ ತೋಟಕ್ಕೆ ನೀರು ಹಾಯಿಸುತ್ತಿದ್ದನು.

ತೋಟವನ್ನೇ ನಂಬಿಕೊಂಡಿದ್ದ ವೀರಯ್ಯನಿಗೆ ಅದನ್ನು ಬಿಟ್ಟುಹೋಗಲು ಮನಸ್ಸು ಬಾರದು. ಮುದಿತನ ಬರುತ್ತಿದೆ. ತೋಟದ ಯಜಮಾನನಿಗೆ ಆತನಲ್ಲಿ ಬಹಳ ನಂಬಿಕೆ. ಎರಡು ಮೂರು ದಿವಸಗಳಿಗೆ ಒಂದಾವರ್ತಿ ಬಂದು ಪಕ್ವವಾದ ಹಣ್ಣುಗಳನ್ನು ಕೊಯ್ದು ಮಾರಟಕ್ಕೆ ಕಳುಹಿಸುವನು.

ಒಂದು ದಿನ ವೀರಯ್ಯ ಸೌದೆಯನ್ನು ಹಳ್ಳಿಯಲ್ಲಿ ಮಾರಿ ಕೆಲವು ಪದಾರ್ಥಗಳನ್ನು ಕೊಂಡುಕೊಂಡ. ಹಿಂತಿರುಗುವಾಗ ಎಲ್ಲಿಂದಲೋ ಈರುಳ್ಳಿ ವಾಸನೆ ಬಂತು. ಮೂಗಿಗೆ ಆ ಕಮ್ಮನೆಯ ವಾಸನೆ ಚೆನ್ನಾಗಿತ್ತು. ಈರುಳ್ಳಿ ಬೇಳೆ ಹುಳಿ ಮಾಡಿಸಬೇಕೆಂದು ಮನಸ್ಸಾಯಿತು. ಅರ್ಧ ವೀಸೆಯಷ್ಟು ಈರುಳ್ಳಿ ಕೊಂಡು ವೀರಯ್ಯ ಮನೆದಾರಿ ಹಿಡಿದ.

ಏನೋ ಯೋಚಿಸುತ್ತಾ ಮನೆಕಡೆ ನಡೆಯುತ್ತಿದ್ದ ವೀರಯ್ಯನಿಗೆ ಒಂದು ಭೀಕರಾಕೃತಿ ಎದುರಾಯಿತು. ಒಂದು ಗಜದಷ್ಟು ಸಮೀಪಕ್ಕೆ ಬರುವ ತನಕ ವೀರಯ್ಯನಿಗೆ ಅದರ ಗುರುತು ಹತ್ತಲಿಲ್ಲ.

ಅದೊಂದು ಭಾರಿ ಕರಡಿ, ಎರಡು ಕಾಲುಗಳ ಮೇಲೆ ನಿಂತು, ಬಾಯಿ ತೆರೆದು, ಉಗುರುಗಳನ್ನು ಹೊರಚಾಚಿ ವೀರಯ್ಯನನ್ನು ಹಿಡಿಯಲು ಸಿದ್ಧವಾಗಿ ನಿಂತಿತ್ತು.

ವೀರಯ್ಯನಿಗೆ ಮೇಲುಸಿರು ಹಾರಿಹೋಗುವಂತಾಯಿತು. ಹಿಂದಕ್ಕೆ ಓಡಿಹೋಗಲು ಸಾಧ್ಯವಿಲ್ಲ. ಆತ್ಮರಕ್ಷಣೆ ಮಾಡಿಕೊಳ್ಳಲು ಕೈಯಲ್ಲಿ ಆಯುಧವಿಲ್ಲ. ಹೇಗೂ ಸಾವು ತಪ್ಪುವಂತಿಲ್ಲ. ಕರಡಿಯನ್ನು ಕುರಿತು "ನನ್ನ ಕೊಂದರೆ ಈಗ ನಿನ್ನ ಹಸಿವು ನೀಗಬಹುದು. ಮತ್ತೆ ನಾಳೆ ನಿನಗೆ ಏನಾದರೂ ಸಿಗಬೇಕಲ್ಲವೇ?" ಎಂದ.

"ನಾಳೆ ಯೋಚನೆ ಈಗೇಕೆ?" ಎಂದಿತು ಕರಡಿ.

"ಹಾಗಲ್ಲ, ಇವತ್ತು ನಾಳೆ ಮಾತ್ರವಲ್ಲ. ನಿನಗೆ ಯಾವತ್ತು ಹಸಿವಾದರೂ ಅದನ್ನು ಇಂಗಿಸಲು ನಾನು ಸಿದ್ಧವಾಗಿರುತ್ತೇನೆ" ಎಂದ ವೀರಣ್ಣ.

"ಅಂದರೆ...." ಎಂದಿತು ಕರಡಿ.

"ನಿನಗೆ ಹಸಿವಾದಾಗಲೆಲ್ಲಾ ನಮ್ಮ ಮನೆಗೆ ಬಾ. ಹೊಟ್ಟೆ ತುಂಬಾ ಊಟವಿಡುವೆನು" ಕರಡಿ ಯೋಚಿಸುತಿತ್ತು.

ಆಗ ವೀರಯ್ಯ ತನ್ನಲ್ಲಿದ್ದ ಗಂಟನ್ನು ಬಿಚ್ಚಿ ತೋರಿಸಿ "ಇದೋ ನೋಡು, ಮನೆಗೆ ಪದಾರ್ಥಗಳನ್ನು ತೆಗೆದುಕೊಂಡು ಹೋಗುತ್ತಿದ್ದೇನೆ. ರಾತ್ರಿಗೆ ಈರುಳ್ಳಿ ಹುಳಿ ಮಾಡಿಸುವೆನು" ಎಂದ.

ಈರುಳ್ಳಿ ಎಂದ ಕೂಡಲೇ ಕರಡಿ ಬಾಯಲ್ಲಿ ನೀರೂರಿತು.

"ಸರಿ....ಈಗ ಬಿಟ್ಟು ಬಿಡುತ್ತೇನೆ. ನನಗೆ ಯಾವತ್ತಾದರೂ ಆಹಾರ ಸಿಗದೆ ಹೋದರೆ ಆವತ್ತು ನಿನ್ನನ್ನು ಕೊಲ್ಲುವೆನು. ಇಂದು ರಾತ್ರಿ ನಿನ್ನ ಮನೆಗೆ ಬರುತ್ತೇನೆ. ಹೇಗೆ ಮರ್ಯಾದೆ ಮಾಡುವೆಯೋ ನೋಡಿಯೇಬಿಡೋಣವಂತೆ. ಸರಿ ನಿನ್ನ ಮನೆಯೆಲ್ಲಿ" ಎಂದು ಕೇಳಿತು ಕರಡಿ.

"ಅಗೋ, ಆ ಮರದ ಹಿಂದೆ ತೋಟವಿದೆಯಲ್ಲಾ, ಅಲ್ಲೇ" ಎಂದ ವೀರಯ್ಯ.

ಸಾವು ತಪ್ಪಿ ಹೊಸ ಜನ್ಮ ಬಂದಂತಾಯಿತು. ಇನ್ನುಮೇಲೆ ಕರಡಿ ದಿನಾಗಲೂ ತನ್ನ ಮನೆಗೆ ಬಂದರೇನು ಗತಿ?

ಮನೆಸೇರಿ ನಡೆದುದನೆಲ್ಲಾ ಹೆಂಡತಿಗೆ ತಿಳಿಸಿದ.

ಆಕೆ ಏನಂದಾಳು? ಪ್ರಮಾದದಿಂದ ಪಾರಾಗುವದಾರಿ ತೋಚಲಿಲ್ಲ.

ಅಂತೂ ಒಂದು ಚಿಕ್ಕ ಮಡಿಕೆಯ ತುಂಬಾ ಈರುಳ್ಳಿ ಬೇಳೆ ಹುಳಿ ಮಾಡಿದ್ದಾಯಿತು.




ಬೆಳಕು ಹರಿಯುವತನಕ ಸುಮ್ಮನಿರಲು ಮನಸ್ಸು ಬರಲಿಲ್ಲವಾಗಿ ಇಬ್ಬರೂ ಅನ್ನ ಂದರು. ಊಟವಾದನಂತರ ಹುಳಿ ಮಿಗಲಿಲ್ಲ; ಅನ್ನವೂ ಉಳಿಯಲಿಲ್ಲ.

ವೀರಯ್ಯ ತಿರುಗಿ ಅಡಿಗೆಮಾಡೆಂದ. ಈರುಳ್ಳಿ ಎಲ್ಲಿದೆ? ಹೊಟ್ಟೆತುಂಬಾ ಊಟ ಮಾಡಿದ್ದ ಪಿಳ್ಳಮ್ಮನಿಗೆ ಮತ್ತೆ ಅಡಿಗೆಮಾಡಲು ಮೈ ಬಗ್ಗಲಿಲ್ಲ.

ಕರಡಿ ಬರುವ ಹೊತ್ತಾಯಿತು. ಮನೆಗೆ ಬೀಗ ಹಾಕಿ ವೀರಯ್ಯ ಪಿಳ್ಳಮ್ಮ ಹುಲ್ಲು ಬಣಬೆಯಲ್ಲಿ ಕಿಮುಕ್ ಎನ್ನದೆ ಅವಿತುಕೊಂಡರು.

ಐದಾರು ನಿಮಿಷಗಳನಂತರ ಬಾಗಿಲಲ್ಲಿ ಸದ್ದಾಯಿತು. ವೀರಯ್ಯ ಪ್ರಾಣ ಬಿಗಿಹಿಡಿದು

ಉಸಿರಾಡುವ ಸುಳಿವು ಎಲ್ಲಿ ಕೇಳಿಸೀತೋ ಎಂದು ಮೆತ್ತಗೆ ಉಸಿರಾಡುತ್ತಿದ್ದ.

ಬಾಗಿಲ ಹತ್ತಿರ ಶಬ್ದ ಹೆಚ್ಚಾಯಿತು. ಭಾರಿ ಗಲಭೆ ಕೇಳಿಸಿತು. ಪ್ರಾಯಶಃ ಹಸಿ ಗೋಡೆಯನ್ನು ಕೆಡವಿರಬಹುದು. ಗುರುಗುಡುತ್ತಾ ನೆಲವನ್ನು ಅಪ್ಪಳಿಸುತ್ತಾ ಕರಡಿ ಗುಡಿಸಲನ್ನು ಸಮಿಾಪಿಸಿತು.

ಬಾಗಿಲಲ್ಲಿ ಬೀಗ ಹಾಕಿರುವುದರಿಂದ ಒಳಗೆ ಯಾರೂ ಇಲ್ಲ ಎಂದುಕೊಂಡಿತು. ಆದರೂ ಕೋಪದಿಂದ ಬಾಗಿಲನ್ನು ಗುದ್ದಿ ಗಲಭೆಮಾಡಿತು. ತನಗೆ ಮೋಸ ಮಾಡಿದ್ದಕ್ಕೆ ವೀರಯ್ಯನ ಮೇಲೆ ಸೇಡು ತೀರಿಸಿಕೊಳ್ಳ ಬೇಕೆಂದು ನಿರ್ಧರಿಸಿತು. ತೋಟವನ್ನು ಒಳ ಹೊಕ್ಕು ಗಿಡಗಳ ರೆಂಬೆಗಳನ್ನು ಇಷ್ಟಾನುಸಾರ ಮುರಿಯಿತು. ಹೂ, ಹೀಚುಗಳನ್ನೆಲ್ಲಾ ಉದು ರಿಸಿತು. ಈ ರೀತಿ ಒಂದು ಗಂಟೆ ಗಲಭೆ ಮಾಡುವ ಹೊತ್ತಿಗೆ ಅದಕ್ಕೆ ಆಯಾಸವಾಯಿತು. ಒಂದೆಡೆ ಹಸಿವು, ಇನ್ನೊಂದೆಡೆ ಕೋಪ ದೇವರೇ ಎನ್ನುತ್ತಾ ಮತ್ತೆ ಗುಡಿಸಿಲಿನ ಹತ್ತಿರ ಬಂತು.

ಕರಡಿ ತಮ್ಮ ಹತ್ತಿರದಲ್ಲೇ ಇರುವುದರಿಂದ ವೀರಯ್ಯ ಪಿಳ್ಳಮ್ಮರಿಗೆ ಮೈಯೆಲ್ಲಾ ಬೆವರಿತು.

ಆದರೂ ಅವರು ಕದಲಲಿಲ್ಲ. ಗುಡಿಸಲಿನ ಬಾಗಿಲನ್ನು ಕರಡಿ ಮತ್ತೆ ಗುದ್ದಿತು. ಆ ಸಮಯಕ್ಕೆ ಸರಿಯಾಗಿ ಪಿಳ್ಳಮ್ಮ ಒಂದು ಸಲ ಸೀನಿದಳು. ಕರಡಿ ತಮ್ಮನ್ನು ನೋಡಿ ಬಿಡುವುದೇನೋ ಎಂಬ ಭೀತಿಯಿಂದ ನಡುಗಿ ಹೋದರವರಿಬ್ಬರೂ.

ಸೀನಿನ ಶಬ್ದ ತುಪಾಕಿ ಹಾರಿಸಿದಂತೆ ಕೇಳಿಸಿತು. ಕರಡಿ ಹೆದರಿ ಓಡಿ ಹೋಯಿತು.

ಬೆಳಗಾಗುವತನಕ ವೀರಯ್ಯನಾಗಲೀ ಪಿಳ್ಳಮ್ಮನಾಗಲೀ ಹುಲ್ಲಿನ ಬಣಬೆಯಿಂದ ಹೊರ ಬರಲಿಲ್ಲ. ತೋಟದೊಳಕ್ಕೆ ಹೋಗಿ ನೋಡಿದರೆ ಎಲ್ಲೆಲ್ಲೂ ಹಣ್ಣುಗಳು, ಸಾಹುಕಾರನು ಬಂದು ನೋಡಿ ಕಥೆಯನ್ನೆಲ್ಲಾ ಕೇಳಿದ. ಒಪ್ಪಂದದಪ್ರಕಾರ ಕೆಳಗೆ ಉದುರಿದ ಹಣ್ಣುಗಳನ್ನೆಲ್ಲಾ ಮಾರಿ, ಲಾಭ ಪಡೆದು ಸೌಖ್ಯದಿಂದಿದ್ದರು ವೀರಯ್ಯ ಮತ್ತು ಪಿಳ್ಳಮ್ಮ. ಕರಡಿ ಮಾಡಿದ ಉಪಕಾರವನ್ನು ವೀರಯ್ಯ ಮರೆಯಲಿಲ್ಲ. ಮತ್ತೆ ಎಂದಾದರೂ ಬರುವುದೇನೋ ಎಂದು ಬಹಳದಿನ ಅದಕ್ಕಾಗಿ ಎದುರು ನೋಡುತ್ತಿದ್ದ. ಆದರೆ ಕರಡಿ ಮತ್ತೆ ಬರಲೇ ಇಲ್ಲ.



## ಉತ್ತರ ಹೇಳು



1. ಪ್ರಪಂಚದಲ್ಲೆಲ್ಲಾ ದೊಡ್ಡನದಿ ಯಾವುದು?
   ಅಮೆಜಾ಼ನ್
   ಮಿಸಿಸಿಪಿ
   ನೈಲ್

2. ಭಾರತದೇಶದ ಮೇಲೆ ಮೊತ್ತಮೊದಲು ದಂಡೆತ್ತಿಬಂದ ಮಹಮ್ಮದೀಯನು ಯಾರು?
   ಬಿನ್‌ಕಾಸಿಮ್
   ಮಹಮದ್ ಘಜನಿ
   ಮಹಮದ್ ಗೋರಿ

3. ಎಲ್ಲಕ್ಕಿಂತಲೂ ಎತ್ತರವಾದ ಜಂತು ಯಾವುದು?
   ಒಂಟೆ
   ಆನೆ
   ಜಿರಾಫೆ

4. ಭಾರತದಲ್ಲಿ ಎಲ್ಲಕ್ಕಿಂತಲೂ ಉದ್ದವಾದ ರೈಲ್ವೆಮಾರ್ಗ ಯಾವುದು?
   ಸೋನ್
   ಹೌರಾ
   ಗೋದಾವರಿ

5. ಟೆಲಿಫೋನ್ ಕಂಡುಹಿಡಿದವರು ಯಾರು?
   ವಾಟ್ಸನ್
   ಫ್ಲೆಮಿಂಗ್
   ಬೆಲ್

6. ಕುಮಾರಸಂಭವ ಬರೆದವರು ಯಾರು?
   ಕಾಳಿದಾಸ
   ರಾಘವಾಂಕ
   ಕುಮಾರವ್ಯಾಸ

## ಮಾತಿನ ಕುಶಲತೆ



ಆ ವಿಶಾಲವಾದ ಮೈದಾನದಲ್ಲಿ ಆ ಈರ್ವರು ಪೋರರು ಸಂಧಿಸಿದರು. ಇಬ್ಬರೂ ಜನಕ್ಕೆ ಟೋಪಿ ಹಾಕಿ ಮೋಸ ಮಾಡುವವರೇ! ಆದರೆ ಈಗ ತಮ್ಮೊಳಗೇ ಹೇಗೆ ಮಾತಾಡಬೇಕೆಂದು ಅವರಿಗೆ ತಿಳಿಯಲಿಲ್ಲ. ತಾವೆಲ್ಲಿ ಸೋಲುವೆವೋ ಎಂದು ಇಬ್ಬರಿಗೂ ಚಿಂತೆ! ಕೆಲಹೊತ್ತಿನ ಮೇಲೆ ಅವರಲ್ಲೊಬ್ಬ ಮಾತಿಗಾರಂಭಿಸಿದ, "ನೋಡು ಮಿತ್ರಾ, ನನಗೆ ಇತ್ತೀಚೆಗೆ ೧೦೦ ವರ್ಷಗಳೆಂದರೆ ಒಂದು ಕ್ಷಣದಂತಾಗಿಬಿಟ್ಟಿದೆ" ಎಂದ.

ಆ ಮೇಲೆ ಈತ, "ನನಗೆ ೧೦೦೦ ರೂಪಾಯಿಗಳೆಂದರೆ ಒಂದು ದುಡ್ಡಿನಷ್ಟು (ಬಿಲ್ಲಿ) ಕಿಮ್ಮತ್ತಾಗಿಬಿಟ್ಟಿದೆ" ಎಂದ.

ಆಗ ಮೊದಲನೆಯವನು "ಹಾಗಾದರೆ ನನಗೆ ನಿನ್ನ ಲೆಕ್ಕದಂತೆ ಒಂದು ದುಡ್ಡು ಕೊಟ್ಟುಬಿಡಪ್ಪ!"

ಕೂಡಲೇ ಎರಡನೆಯವನು, "ಹಾಗಾದರೆ ನೀನು ನಿನ್ನ ಒಂದು 'ಕ್ಷಣ' ತಡೆದರೆ ನಾನು ನಿನಗೆ ಒಂದು ದುಡ್ಡು ಕೊಡುವೆನು" ಎಂದು ಹೇಳಿದ. ಇಬ್ಬರೂ ಖೊಳ್ ಅಂತ ನಕ್ಕು ಅಲ್ಲಿಂದ ಜಾರಿದರು

ಕೆ. ಎನ್. ಕಟ್ಟಿ, ಸವದತ್ತಿ

## —: ನಗೆಹನಿ :—

ಸ್ಕೂಲು ಇನ್‌ಸ್ಪೆಕ್ಷನ್‌ಗಾಗಿ ಬಂದ ಡಿ. ಇ. ಓ. ಒಬ್ಬ ವಿದ್ಯಾರ್ಥಿಯನ್ನು ಪ್ರಶ್ನೆ ಮಾಡಿದ: 'ಮಗೂ, ಒಬ್ಬ ವರ್ತಕನು ಒಂದು ವಸ್ತುವನ್ನು 12-6-0ಗೆ ಕೊಂಡು, ರು. 10-12-0ಗೆ ಮಾರಿದರೆ ಆತನಿಗೆ ಲಾಭವಾಗಲೀ, ನಷ್ಟವಾಗಲೀ ಎಷ್ಟು?

ಆ ಹುಡುಗ ಒಂದುಕ್ಷಣ ಯೋಚಿಸಿ ಹೇಳಿದ "ಆಣೆಗಳಲ್ಲಿ ಲಾಭವಾದರೂ, ರೂಪಾಯಿಗಳಲ್ಲಿ ನಷ್ಟವಾಗುತ್ತದೆ ಸಾರ್"




# ಸಜೀವ ಸಮಾಧಿ

ಸಿಕ್ ಜನರ ನಾಯಕ ಗುರುಗೋವಿಂದಸಿಂಗ್ ತುಂಬಾ ಪ್ರಭಾವಶಾಲಿ. ಮೊಗಲರಿಗೆ ಅದರಲ್ಲೂ ಔರಂಗಜೇಬನಿಗೆ ಆತನ ಹೆಸರೆಂದರೆ ಹೆದರಿಕೆ. ಅವರಿಬ್ಬರಿಗೆ ಅಪಾರ ವೈರತ್ವ. ಆ ದ್ವೇಷ ಕ್ರಮೇಣ ಬೆಳೆಯ ತೊಡಗಿತು. ಸಾಧ್ಯವಾದಾಗಲೆಲ್ಲಾ ಸಿಕ್ಕರೂ ಮೊಗಲರೂ ಹೋರಾಡುತ್ತಿದ್ದರು. ಔರಂಗಜೇಬನಿಗೆ ಕ್ರೋಧ ಕೆರಳಿತು.

ಸಿಕ್ಕರು ತಲೆ ಎತ್ತದಂತೆ ತುಳಿದುಹಾಕಿರೆಂದು ತನ್ನ ಸೇನಾಧಿಪತಿಗಳಿಗೆ ಆಜ್ಞೆ ಮಾಡಿದ.

ಒಂದುಸಲ ಸಿಕ್ಕರೊಂದಿಗೆ ಕೀರ್ತಿಪುರವೆಂಬ ಸ್ಥಳದಲ್ಲಿ ಮೊಗಲರು ಯುದ್ಧ ಮಾಡಬೇಕಾದ ಪ್ರಸಂಗ ಬಂತು.

ಯುದ್ಧಕ್ಕೆ ಪೂರ್ವ ಗುರುವಿನ ಬಳಿಗೆ ಮೊಗಲರು ರಾಯಭಾರ ಕಳುಹಿಸಿದರು.

'ನೀವು ಯಾರನ್ನು ಎದುರಿಸುತ್ತೀರೆಂದು ಮುಂದೆ ನಿಮಗೆ ಅನುಭವವಾಗುತ್ತದೆ. ಇದೇನು ಸಣ್ಣ ಪುಟ್ಟ ಸಾಮಂತರನ್ನು ಬೆದರಿಸಿದ ಹಾಗೆಂದು ಭಾವಿಸಬೇಡಿ. ಕುರಿಹೋಗಿ ಬೆಟ್ಟಕ್ಕೆ ಡಿಕ್ಕಿ ಹೊಡೆವಂತೆ ಆದೀತು ನಿಮ್ಮ ಗತಿ. ಈಗಲಾದರೂ ಜಗತ್ತಿನಲ್ಲಿ ವಿಜೇಯನಾಗಿರುವ ನಮ್ಮ ಪ್ರಭುವಿನ ಬಳಿಗೆ ಬಂದು ಕ್ಷಮಾಪಣೆ ಕೇಳಿ ಇಸ್ಲಾಂ ಮತ ಸೇರಿಕೊಳ್ಳಿ' ಎಂದು ಹೇಳಿದರು.

ರಾಯಭಾರಿ ಈ ಮಾತುಗಳನ್ನು ಹೇಳುತ್ತಿದ್ದಾಗ ಗುರುಗೋವಿಂದರ ಮಗ ಅಜೀತ್ ಅಲ್ಲಿದ್ದ.

'ಇನ್ನುಮೇಲೆ ಹೀಗೆ ಮನ ನೋಯಿಸುವ ಮತ್ತೊಂದು ಮಾತನ್ನು ನುಡಿದೆಯೆಂದರೆ ನಿನ್ನ ಗತಿ ಏನಾಗುವುದೋ, ನೋಡಿಕೊ' ಎಂದು

ಸುಮಿತ್ರಾನಂದ, ಬೊಂಬಾಯಿ

ಕತ್ತಿಯನ್ನು ಒರೆಯಿಂದ ತೆಗೆದು ರಾಯಭಾರಿಯ ಕಡೆ ಝಳಪಿಸಿದ.

ರಾಯಭಾರಿ ಬೇರೇನೂ ಮಾತನಾಡಲಾರದೆ ಖಿನ್ನನಾಗಿ ಹಿಂತಿರುಗಿದ. ರಾಯಭಾರಿ ಅಜಿತನಾಡಿದ ಮಾತುಗಳನ್ನು ತನ್ನ ಸೇನಾಧಿಪತಿಗೆ ಅರುಹಿದ.

ಇದನ್ನು ಕೇಳಿ ಮೊಗಲರು ಉರಿದುಬಿದ್ದರು. ಇದುವರಿಗೆ ಕೆರಳಿದ್ದ ಸೆಣಸಾಟಕ್ಕೆ ಈ ಪ್ರಸಂಗದಿಂದ ಬೆಂಕಿಯಲ್ಲಿ ತುಪ್ಪ ಸುರಿದಂತಾಯಿತು. ಈ ಉಭಯ ಪಕ್ಷಗಳಿಗೂ ಪ್ರಬಲವಾದ ವೈರತ್ವ ಮತ್ತಷ್ಟು ಬಲವಾಯಿತು.

ಇನ್ನು ಸ್ವಲ್ಪಕಾಲಾನಂತರ ಆನಂದಪುರದ ಬಳಿ ಘೋರವಾದ ಯುದ್ಧ ನಡೆಯಿತು. ಮೊಗಲರ ಸೇನೆಯ ಹೊಡೆತ ಜೋರಾಯಿತು. ಶತ್ರುಗಳ ಪೆಟ್ಟನ್ನು ತಾಳಲಾರದೆ ಹೋದರು ಸಿಕ್‌ವೀರರು. ಮೊಗಲರು ಆ ಕೋಟೆಯನ್ನು ವಶಪಡಿಸಿಕೊಂಡರು.

ಆ ಸಮಯದಲ್ಲಿ ಗುರುಗೋವಿಂದರ ತಾಯಿ ಗುಜರಿ ತನ್ನ ಮೊಮ್ಮಕ್ಕಳಿಬ್ಬರನ್ನೂ ಹಿಂದೆಕಟ್ಟಿಕೊಂಡು ತಪ್ಪಿಸಿಕೊಂಡು ಸಿರ್‌ಹಿಂದ್ ಎಂಬ ಪಕ್ಕದ ಪ್ರದೇಶವನ್ನು ಸೇರಿದಳು.

ಆಕೆ ಅಲ್ಲಿಗೆ ತಲುಪಿರಬಹುದು; ಶತ್ರುಗಳು ಮಾತ್ರ ಅವರ ಬೆನ್ನಟ್ಟುವುದನ್ನು ಬಿಡಲಿಲ್ಲ. ಮೊಗಲರು ಗುಜರಿ ಮತ್ತು ಆಕೆಯ ಮೊಮ್ಮಕ್ಕಳನ್ನು ಹುಡುಕಿಸಿ ಸೆರೆಹಿಡಿದು ಆ ಪರಗಣಕ್ಕೆ ಅಧಿಪತಿಯಾದ ವಜೀರ್‌ಖಾ಼ ಎದುರಿನಲ್ಲಿ ನಿಲ್ಲಿಸಿದರು.




ಒಂದು ದಿವಸ ವಜೀರ್‌ಖಾನನು ಆ ಬಾಲಕರೊಂದಿಗೆ ಮಾತನಾಡುವಾಗ "ಎಲೈ ಹುಡುಗರಿರಾ, ನಿಮ್ಮನ್ನು ಬಿಟ್ಟುಬಿಡುತ್ತೇನೆಂದುಕೊಳ್ಳಿ. ಆಗ ನೀವೇನು ಮಾಡುತ್ತೀರಿ" ಎಂದು ತಮಾಷೆಯಾಗಿ ಕೇಳಿದ.

ಅದಕ್ಕೆ ಆ ಬಾಲಕರು "ಸೈನ್ಯ ಜಮಾವಣೆ ಮಾಡುತ್ತೇವೆ. ನಿನ್ನನ್ನು ಕೊಂದುಹಾಕುತ್ತೇವೆ" ಎಂದು ತಡೆಬಡಿಸದೆ ಸಮಾಧಾನ ಹೇಳಿದರು. ಆ ಮಾತನ್ನು ಅಲ್ಲಿಗೇ ಮುಗಿಸಲಿಲ್ಲ ವಜೀರ್.

"ಮತ್ತೆ ನೀವು ಯುದ್ಧದಲ್ಲಿ ಸೋತರೇ?" ಎಂದು ಮರುಪ್ರಶ್ನೆ ಹಾಕಿದ.




"ನಿನ್ನನ್ನು ಕೊಲ್ಲುವತನಕ ನಿದ್ದೆ ಮಾಡೆವು. ಹೋರಾಡುತ್ತಲೇ ಇರುತ್ತೇವೆ" ಎಂದು ಪ್ರತ್ಯುತ್ತರ ಹೇಳಿದರು ತುಸವಾದರೂ ಹಿಂದು ಮುಂದೆ ನೋಡದೆ.

ಹುಡುಗರ ಪೌರುಷ ಮತ್ತು ಛಲಗಳಿಗೆ ವಜೀರ್ ಬೆಕ್ಕಸಬೆರಗಾದ.

ಈ ವರ್ತಮಾನ ತಿಳಿದ ಕೂಡಲೇ ಮತ ಗುರುವಾದ ಉಲೇಮಾ ಹಾಜರಾದ.

ಬಂದವನೇ ವಿಚಾರಣೆ ಮಾಡಿ ಹುಡುಗರಿಬ್ಬರಿಗೂ ಮರಣಶಿಕ್ಷೆ ವಿಧಿಸಿದ. ಇಸ್ಲಾಂ ಮತಕ್ಕೆ ಸೇರಿದರೆ ಕ್ಷಮಿಸುವುದಾಗಿ ತಿಳಿಸಿದ.

ಉಲೇಮಾನ ತೀರ್ಮಾನವನ್ನು ಹುಡುಗರಿಗೆ ತಿಳಿಸಿ "ಏನು, ಇಸ್ಲಾಂ ಮತಕ್ಕೆ ಸೇರುತ್ತೀರಾ ಇಲ್ಲ, ಪ್ರಾಣಗಳನ್ನು ಕಳೆದುಕೊಳ್ಳುತ್ತೀರಾ ಹೇಳಿ" ಎಂದು ಕೇಳಿದರು.

ವೀರ ಸಿಂಹಗಳಂತೆ ಆ ಬಾಲಕರಿಬ್ಬರೂ ಏಕಕಂಠದಿಂದ "ಪ್ರಾಣಗಳನ್ನು ನೀಗುತ್ತೇವೆ" ಎಂದು ತಮ್ಮ ವಜ್ರಸಂಕಲ್ಪವನ್ನು ತಿಳಿಸಿದರು. ಅದನ್ನು ಕೇಳಿ ಎಲ್ಲರೂ ಆಶ್ಚರ್ಯ ಚಕಿತರಾದರು.

ಉಲೇಮಾನ ಆಜ್ಞೆಯ ಪ್ರಕಾರ ಆ ಬಾಲಕರನ್ನು ಭಾರಿ ಗೋಡೆಯೊಳಗೆ ನಿಲ್ಲಿಸಿ, ಸಮಾಧಿಮಾಡಲು ಸಿದ್ಧರಾದರು.

ಒಂದೊಂದು ವರಸೆ ಗೋಡೆ ಕಟ್ಟುವಾಗಲೂ 'ಈಗಲಾದರೂ ಇಸ್ಲಾಂಮತಕ್ಕೆ ಸೇರುವಿರಾ' ಎಂದು ಆ ಕೆಲಸಗಾರರು ಕೇಳುತ್ತಲೇ ಇದ್ದರು.

ಆ ಬಾಲಕರು ಒಪ್ಪಲಿಲ್ಲ.

ಕಟ್ಟಕಡೆಯ ಇಟ್ಟಿಗೆ ವರಸೆಯನ್ನು ಜೋಡಿಸುವಾಗಲೂ ಕೊನೆಯಬಾರಿ ಕೆಲಸಗಾರರು ವಿಚಾರಿಸಿದರು. ಅವರ ನಿರ್ಧಾರ ಚಲಿಸಲಿಲ್ಲ.

ಮೊಗಲರು ಆ ಹುಡುಗರನ್ನು ಸಜೀವವಾಗಿ ಸಮಾಧಿ ಮಾಡಿದರು. ಈ ರೀತಿ ಬಾಲಕರಿಬ್ಬರೂ ಆತ್ಮಾರ್ಪಣೆಮಾಡಿ ತಮ್ಮ ವಂಶದ ಮರ್ಯಾದೆ, ಸಿಕ್‌ಮತಸ್ಥರ ಗೌರವಗಳನ್ನು ಉಳಿಸಿ ಹುತಾತ್ಮರಾದರು.

# ಹೂಗಳಲ್ಲಿ ವಾಸನೆ ಎಲ್ಲಿಂದ ಬರುತ್ತೆ ?



**ಹೂ**ಗಿಡಗಳು ಒಂದು ಬಗೆಯ ತೈಲವನ್ನು ತಯಾರಿಸುತ್ತವೆ. ಅದರಿಂದಲೇ ಹೂಗಳಲ್ಲಿ ವಾಸನೆ ಬರುವುದು ಒಂದು ಜಾತಿಯ ಹೂಗಳಲ್ಲಿ ತಯಾರಾಗುವ ತೈಲ ಸಾಧಾರಣವಾಗಿ ಒಂದೇ ತರಹೆಯದಾಗಿರುತ್ತದೆ.

ಇದಕ್ಕೆ ಒಂದು ಉದಾಹರಣೆಯೆಂದರೆ ' ಕರ್ಪೂರತೈಲ ' ಕರ್ಪೂರತೈಲ ಒಂದು ಪ್ರತ್ಯೇಕ ಜಾತಿ ಹೂಗಳಿಂದ ದೊರೆಯುತ್ತದೆ. ಕಾರ್ಬ್ ಹೈಡ್ರೋಜನ್ ಬೆರೆಸುವುದರಿಂದ ಈ ಎಣ್ಣೆ ತಯಾರಾಗುತ್ತದೆ. ಈಬಗೆಯ ಎಣ್ಣೆ ಗಾಳಿಯಲ್ಲಿ ಹಗುರವಾಗಿ ಬೆರತುಹೋಗುವುದು. ಈ ತೈಲಗಳಿಂದ ಬಹು ಬಗೆಯ ಲಾಭವಿದೆ. ಉತ್ತಮ ಕ್ರಿಮಿಕೀಟಗಳು ಹತ್ತಿರಸೇರುವುದಿಲ್ಲ. ಕೀಟಗಳಕಾಟದಿಂದ ನಮ್ಮನ್ನು ರಕ್ಷಿಸಿಕೊಳ್ಳಬಹುದು.

ನಿಜಾಂಶವೆಂದರೆ ಹೂಗಳು ತಮ್ಮ ಲಾಭಕ್ಕೋಸ್ಕರವೇ ಈ ಎಣ್ಣೆಗಳನ್ನು ತಯಾರಿಸುತ್ತದೆ. ಸುವಾಸನೆ ಹೂಗಳಲ್ಲಿರುತ್ತವೆ. ಎಲೆಗಳಲ್ಲಿ, ರೆಂಬೆಗಳಲ್ಲಿ, ಚಿಗುರಿನಲ್ಲಿ ಈ ಸುವಾಸನೆ ಇರುವುದಿಲ್ಲ. ನಮಗೆಲ್ಲ ಈ ವಿಷಯ ತಿಳಿದುದೇ. ಪುಷ್ಪಗಳು ಸೃಷ್ಟಿಯಾಗಿರುವುದೇಕೆಂಬುದನ್ನು ತಿಳಿದುಕೊಂಡರೆ ಇದರ ತಾತ್ಪರ್ಯ ನಮಗೆ ಅರಿವಾಗುವುದು. ಹೂಗಳು ನೆಲದಮೇಲೆ ಉದುರಿ ಮತ್ತೆ ಹೊಸ ಹೂಗಳನ್ನು ಹುಟ್ಟಿಸುವ ಬೀಜಗಳನ್ನು ಬಚ್ಚಿಟ್ಟಿರುವುದೆ ಇದರತಾತ್ಪರ್ಯ.

ಈ ಬೀಜಗಳನ್ನು ನೆಡುವುದಕ್ಕೆ ಸಾಮಾನ್ಯವಾಗಿ ಹುಳುಹುಪ್ಪಟೆ ಸಿದ್ಧಗೊಳಿಸುತ್ತವೆ. ಈ ಹುಳಹುಪ್ಪಟೆ ಅದೇಜಾತಿಯ ಇತರ ಹೂಗಳಮೇಲೆ ಕುಳಿತಿದ್ದು ಹಾರುತ್ತವೆ. ಹಾರುವಾಗ ತಮ್ಮೊಂದಿಗೆ ಪ್ರತ್ಯೇಕವಾದ ಒಂದು ಪದಾರ್ಥವನ್ನು ಹೊತ್ತುತರುತ್ತವೆ. ಆ ಪದಾರ್ಥ ಬೆರತ ಹೊರತು ಹೂವಿನಲ್ಲಿರುವ ಬೀಜಗಳು ನಾಟುವುದಕ್ಕೆ ಯೋಗ್ಯವಾಗುವುದಿಲ್ಲ. ಇದರಿಂದ ಹೂಗಳು ಹುಳು ಹುಪ್ಪಟೆಗಳನ್ನು ತಮ್ಮ ಕಡೆಗೆ ಆಕರ್ಷಿಸ ಬೇಕಾದುದು ಅಗತ್ಯನೆಂಬುದು ನಮಗೆ ಗೊತ್ತಾಗುತ್ತದೆ. ಆದುದರಿಂದ ಹೂಗಿಡಗಳು ತಮ್ಮ ಹೂಗಳನ್ನು ಅಂದವಾಗಿ ಒಳ್ಳೆ ಸುವಾಸನೆಯಿಂದ ಹುಟ್ಟಿಸುತ್ತವೆ.

ಆದರೆ ಕೆಲಹೂಗಳಲ್ಲಿ ಸುವಾಸನೆ ಇರುವುದಿಲ್ಲ. ಏಕೆ ಎಂದು ಕೇಳಬಹುದು. ಈ ಬಗೆಯ ಹೂಗಳಲ್ಲಿ ಬೀಜಗಳನ್ನು ಸಿದ್ಧಗೊಳಿಸುವುದು ಹುಳಹುಪ್ಪಟೆಯಲ್ಲ; ಬರಿಗಾಳಿ. ಆದುದರಿಂದ ಈ ಹೂಗಳಿಗೆ ಸುವಾಸನೆ ಅಗತ್ಯವಿಲ್ಲ. ಅವುನೋಡಲು ತುಂಬಾಸಣ್ಣವು. ಕೆಲಹೂಗಳು ಚಿಕ್ಕವಾಗಿದ್ದರೂ ತಮ್ಮ ಸುವಾಸನೆಯಿಂದ ಹುಳಹುಪ್ಪಟೆಗಳನ್ನೂ ಆಕರ್ಷಿಸುತ್ತವೆ.




# ಜೀವಜಲ

ಕುಂತಳರಾಜ್ಯವನ್ನು ಆಳುತ್ತಿದ್ದ ಮಹಾರಾಜನಿಗೆ ವಿಚಿತ್ರವ್ಯಾಧಿ ಹತ್ತಿಕೊಂಡಿತ್ತು. ಆ ವ್ಯಾಧಿ ತೀರದದಾಹ. ಎಷ್ಟುಸಿಹಿ ನೀರುಕುಡಿದರೂ, ಎಷ್ಟೋ ಬಗೆಯ ಪಾನೀಯಗಳನ್ನು ಔಷಧಿಗಳನ್ನು ಕುಡಿದರೂ ಆತನ ಬಾಯಾರಿಕೆ ಅಡಗಲಿಲ್ಲ. ಈ ಕಾರಣದಿಂದಲೇ ಮಂಚದಲ್ಲಿ ಮಲಗಿಕೊಂಡ. ಅನೇಕ ವಿಧವಾದ ಮಂತ್ರಗಳನ್ನು ಉಪಯೋಗಿಸಿದರು. ವ್ಯಾಧಿ ಮಾತ್ರ ಗುಣವಾಗಲಿಲ್ಲ. ರಾಜ್ಯವೆಲ್ಲಾ ತಲ್ಲಣಿಸಿಹೋಯಿತು.

ಆ ರಾಜನಿಗೆ ಮಕ್ಕಳಿರಲಿಲ್ಲ. ತಾಯಿತಂದೆಗಳಿಲ್ಲದ ಮೂವರು ಸೋದರಳಿಯಂದಿರು ಮಾತ್ರ ಆತನ ಆಶ್ರಯದಲ್ಲಿ ಬದುಕುತ್ತಿದ್ದರು.

ಒಂದುದಿನ ಅರಮನೆಯ ಮುಂದಿದ್ದ ತೋಟದಲ್ಲಿ ಆ ಮೂವರು ಅಣ್ಣತಮ್ಮಂದಿರು ವಿಚಾರಮಗ್ನರಾಗಿ ಮಾತಿನಲ್ಲಿ ತೊಡಗಿದ್ದರು. ಆಗ ಮುದುಕಮಾಲಿ ಬಂದು "ಅಯ್ಯನವರೇ ಈ ವೈದ್ಯರೇನು ಮಾಡಲಾಪರು? ಈ ವಿಚಿತ್ರ ವ್ಯಾಧಿಯನ್ನು ಗುಣಪಡಿಸಬೇಕಾದರೆ 'ಜೀವಜಲ' ಅಂತ ಒಂದು ಜಲವಿದೆ. ಇದರವಿಷಯ ನಾನು ಚಿಕ್ಕಂದಿನಲ್ಲಿ ಕೇಳಿದ್ದೆ" ಎಂದ.

ಅಣ್ಣತಮ್ಮಂದಿರು ಆತುರವಾಗಿ "ಹಾಂ, ಹಾಗೋ ಜೀವಜಲ ಎಲ್ಲಿ ಸಿಗುತ್ತೆ?" ಎಂದು ಪ್ರಶ್ನೆಮಾಡಿದರು. "ನನಗೆಗೊತ್ತಿಲ್ಲ. ಪೂರ್ವದಿಕ್ಕಿನಲ್ಲಿ ಸಿಗುತ್ತದೆಂದುಮಾತ್ರ ಕೇಳಿದ್ದೆ" ಎಂದ ಆ ಮಾಲಿ.

ಮಾರನೇಯದಿನ ಬೆಳಗ್ಗೆ ಮೂವರಲ್ಲಿ ಹಿರಿಯವನು ರಾಜನ ಅನುಮತಿಪಡೆದು ಒಳ್ಳೆ ಕುದುರೆಯನ್ನು ಹತ್ತಿ ಜೀವಜಲತರಲು ಪೂರ್ವದಿಕ್ಕಿಗೆ ತಾನು ಪ್ರಯಾಣಮಾಡಿದ. ಹೋಗುತ್ತಾ ಹೋಗುತ್ತಾ ಕೆಲವುದಿನಗಳಾದ

ಶಾರದಾ ಗೋಪಾಲ, ಹುಬ್ಬಳ್ಳಿ




ಮೇಲೆ ಎರಡು ಬೆಟ್ಟಗಳಮಧ್ಯೆ ಒಂದು ಕಣಿವೆ ಕಾಣಿಸಿತು. ಆ ಕಣಿವೆಯಮೂಲಕ ಹೊರಡಲು ಬೆಟ್ಟದಮೇಲೆ ತಪಸ್ಸು ಮಾಡುತ್ತಿದ್ದ ಒಬ್ಬ ಋಷಿ "ಎಲಾ, ಯುವಕನೇ ಎಲ್ಲಿಗೆ ಹೊರಟೆ?" ಎಂದು ಗಟ್ಟಿಯಾಗಿ ಕೂಗಿದ.

"ಎಲಾ, ಮುದುಕಪ್ಪಾ, ಸುಮ್ಮನಿರು. ನಿನ್ನಕೆಲಸ ನೀನು ನೋಡಿಕೋ" ಎಂದ ತಾತ್ಸಾರವಾಗಿ.

"ಸರಿ, ನಿನ್ನಕರ್ಮ" ಎಂದ ಋಷಿ.

ಹಾಗೇ ಸ್ವಲ್ಪದೂರ ಹೊರಡುವ ವೇಳೆಗೆ ಕಣಿವೆಯದಾರಿ ಕ್ರಮವಾಗಿ ಚಿಕ್ಕದಾಗುತ್ತಾ ಕುದುರೆ ಕದಲುವುದಕ್ಕೂ ಸಾಕಾಗದಾಯಿತು. ದಾರಿಯಿಲ್ಲದೆ ಅವನಲ್ಲೇ ಉಳಿದುಬಿಟ್ಟ.

ಎಷ್ಟು ದಿವಸವಾದರೂ ಹಿರಿಯವನು ಹಿಂತಿರುಗಲಿಲ್ಲವಾದುದರಿಂದ ಎರಡನೇಯವನು ಇನ್ನೊಂದು ಕುದುರೆ ಹತ್ತಿ ಪ್ರಯಾಣ ಮಾಡಿದ. ಅವನೂಸಹ ಅದೇ ಕಣಿವೆಯನ್ನು ಸೇರಿದ.

ಬೆಟ್ಟದಮೇಲೆ ತಪಸ್ಸುಮಾಡುತ್ತಿದ್ದ ಋಷಿ ಎರಡನೇಯವನನ್ನೂ ಅದೇರೀತಿ ಮಾತನಾಡಿಸಿದ. ಎರಡನೇಯವನೂ ಸಹ ಅಣ್ಣನಂತೆ ಗೇಲಿಮಾಡಲು "ಸರಿ ನಿನ್ನ ಪ್ರಾರಬ್ಧ, ಹೇಗಾದರೂ ಹೋಗು" ಎಂದು ಋಷಿ ಸುಮ್ಮನಾದ. ಇನ್ನೂ ಸ್ವಲ್ಪದೂರ ಹೋದನಂತರ ಎರಡನೇಯವನಿಗೂ ಹಿರಿಯವನ ಪಾಡಾಯಿತು. ಅವನೂ ಅಲ್ಲೇ ಇದ್ದುಬಿಟ್ಟ.

ಎಷ್ಟುಕಾಲವಾದರೂ ಎರಡನೇಯವನೂ ಬರಲಿಲ್ಲ. ಮೂರನೇಯವನು ಪ್ರಯಾಣ ಬೆಳಸಿದ. ಅವನು ಅದೇ ಬೆಟ್ಟಗಳ ಹಾದಿಯಲ್ಲಿ ಹೊರಟ. ಆವೊದಲು ಅಣ್ಣತಮ್ಮಂದಿರಿಬ್ಬರನ್ನೂ ಕೇಳಿದಂತೆ ಋಷಿ ಮೂರನೇಯವನನ್ನು ಪ್ರಶ್ನೆಮಾಡಲು, ಅದಕ್ಕೆ ಆತನು ವಿನಯವಾಗಿ, "ಕುಂತಳರಾಜ್ಯವನ್ನು ಆಳುತ್ತಿರುವ ನಮ್ಮ ಮಾವಂದಿರು ಅದಮ್ಯ ದಾಹದಿಂದ ನರಳುತ್ತಿದ್ದಾರೆ. ನಾನು ಜೀವಜಲ ತರಲು ಹೊರಟಿದ್ದೇನೆ" ಎಂದ.




ಆ ಮಾತು ಕೇಳಿ ಋಷಿ ಸಂತೋಷಪಟ್ಟು "ಹಾಗಾದರೆ ನೀನು ಜೀವಜಲಕ್ಕಾಗಿ ಬಹು ದೂರ ಹೋಗಬೇಕಾಗಿಲ್ಲ. ಅಗೋ ಅಲ್ಲಿ ಕಾಣುತ್ತಿರುವ ಗಿರಿಶಿಖರದ ಬಳಿಗೆ ಹೋಗು. ಅಲ್ಲಿ ಒಂದು ಭಾರಿಕಲ್ಲಿನ ಬಾಗಿಲಿದೆ. ನಾನು ಕೊಡುವ ಈ ಕಮಂಡಲದಿಂದ ಬಾಗಿಲನ್ನು ತಾಕಿಸಿದೆ ಎಂದರೆ ಬಾಗಿಲು ತೆರೆಯುತ್ತದೆ. ಅದೇ ಸಮಯಕ್ಕೆ ಎರಡು ಸಿಂಹಗಳು ನಿನ್ನ ಮೇಲೆ ಬೀಳುತ್ತವೆ. ಅವುಗಳಕಡೆ ಮಂತ್ರಿಸಿರುವ ಈ ಗೆಡ್ಡೆಗೆಣಸು ಎಸೆ. ಅವು ಗೆಡ್ಡೆಗೆಣಸು ತಿನ್ನುವಷ್ಟರಲ್ಲಿ ಒಳಗಿರುವ ಸರೋವರದಿಂದ ಜೀವಜಲವನ್ನು ತಂದುಬಿಡು. ದಾರಿಯಲ್ಲಿ ಒಂದು ವಿಗ್ರಹವಿದೆ. ಅದರಮೇಲೆ ಸ್ವಲ್ಪ ನೀರು ಚೆಲ್ಲು" ಎಂದು ಹೇಳಿದ.

ಋಷಿಗೆ ನಮಸ್ಕರಿಸಿ ಮೂರನೇಯವನು ಕಮಂಡಲ, ಗೆಡ್ಡೆಗೆಣಸುಗಳನ್ನೂ ತೆಗೆದುಕೊಂಡು ಸರಸರನೆ ಆ ಕಲ್ಲುಕದದ ಬಳಿಗೆ ಹೋದ. ಕಮಂಡಲದಿಂದ ಬಾಗಿಲನ್ನು ತಾಕಿದಕೂಡಲೇ ತೆರೆದುಕೊಂಡಿತು. ತತ್ಕ್ಷಣವೇ ಎರಡು ಸಿಂಹಗಳು ಆರ್ಭಟಿಸುತ್ತಾ ಅವನಮೇಲೆ ಹಾರಿದವು.

ಋಷಿ ಹೇಳಿದಂತೆ ಗೆಡ್ಡೆ ಗೆಣಸುಗಳನ್ನು ಅವುಗಳ ಮುಂದೆಸೆದು ಮೂರನೆಯವನು ಚರಚರನೆ ಒಳನುಗ್ಗಿದ. ಅಲ್ಲಿ ವಿಶಾಲವಾದ ಹೂದೋಟ, ಅದರಲ್ಲೊಂದು ಸರೋವರ ಕಾಣಿಸಿತು. ಆ ಸರಸ್ಸಿನಿಂದ ತನ್ನಲ್ಲಿದ್ದ ಚೆಂಬಿನ ತುಂಬಾ ಜೀವಜಲವನ್ನು ತುಂಬಿಕೊಂಡು ಹಿಂತಿರುಗಿದ. ಹತ್ತಿರದಲ್ಲೇ ಒಂದು ಸ್ತ್ರೀ ವಿಗ್ರಹ ಕಾಣಿಸಿತು. ಋಷಿ ಹೇಳಿದ್ದು ಇದೇ ವಿಗ್ರಹವಿರಬೇಕೆಂದು ಮೂರನೆಯುನು ಅದರ ಮೇಲೆ ಸ್ವಲ್ಪ ನೀರು ಚಿಮುಕಿಸಿದ. ಕೂಡಲೇ ಆ ವಿಗ್ರಹಕ್ಕೆ ಪ್ರಾಣಬಂದು ಒಬ್ಬ ನವಮೋಹನಾಂಗಿಯಾದ ರಾಜಕನ್ಯೆಯಾದಳು. "ನೀನು ಯಾರು? ನಿನಗೆ ಈ ಗತಿಯುಂಟಾಗಲು ಕಾರಣ ವೇನು" ಎಂದು ಕೇಳಿದ ಮೂರನೇಯವನು.

ಆಕೆ "ನಾನು ಈ ರಾಜ್ಯದ ರಾಣಿ, ದೇವತೆಗಳ ಶಾಪದಿಂದ ಈ ರಾಜ್ಯ ಹಾಳಾಯಿತು. ನಾನೊಂದು ಶಿಲಾ ವಿಗ್ರಹವಾದೆ. ಈ ಶಾಪದಿಂದ ಪಾರುಮಾಡಿದ ನಿಮಗೆ ನಾನು ಕೃತಜ್ಞಳು. ಒಂದು ವರ್ಷದ ನಂತರ ನೀವಿಲ್ಲಿಗೆ ತಪ್ಪದೆ ಬರಬೇಕೆಂದು ಕೋರುತ್ತೇನೆ. ತಪ್ಪದೆ ಬನ್ನಿರಿ" ಎಂದಳು.




"ಆಗಲಿ, ಬರುವೆನು" ಎಂದು ವಾಗ್ದಾನ ಮಾಡಿ ಮೂರನೆಯವನು ಜೀವಜಲದೊಂದಿಗೆ ಮನೆಗೆ ಹಿಂತಿರುಗಿದ. ಆ ಋಷಿಯನ್ನು ಸಂದರ್ಶಿಸಿ ತನ್ನ ಅಣ್ಣಂದಿರನ್ನು ಕಲ್ಲುಗಳ ಸೆರೆಯಿಂದ ಬಿಡಿಸಬೇಕೆಂದು ಪ್ರಾರ್ಥಿಸಿದ.

ಋಷಿ ಹಿಂದಿನದೆಲ್ಲಾ ವಿವರಿಸಿ "ನಿನ್ನ ಅಣ್ಣಂದಿರ ವಿಚಾರದಲ್ಲಿ ಎಚ್ಚರಿಕೆಯಿಂದಿರು. ಎಂದು ಸಲಹೆ ಕೊಟ್ಟ. ಕಪಟವನ್ನರಿಯದ ಮೂರನೆಯವನು "ಅಗತ್ಯವಾಗಿ" ಎಂದ. ಋಷಿ ಒಪ್ಪಿಕೊಳ್ಳಲೇಬೇಕಾಯಿತು.

ಇನ್ನು ಕೆಲವು ದಿನಗಳಲ್ಲೇ ಮನೆ ಸೇರುತ್ತಾರೆನ್ನುವ ವೇಳೆಗೆ ಅಣ್ಣಂದಿರಿಬ್ಬರೂ ಮೂರನೇಯವನ ಕಣ್ಣು ತಪ್ಪಿಸಿ ಜೀವಜಲವನ್ನು ಕದ್ದು ಕಮಂಡಲದಲ್ಲಿ ಉಪ್ಪುನೀರನ್ನು ತುಂಬಿದರು. ಇದರಿಂದ ಆ ರಾಜಕುಮಾರಿಯನ್ನೂ ತಾವೇ ಮದುವೆಯಾಗಬಹುದೆಂದು ಅವರು ಆಶಿಸಿದರು.

ಮೂವರು ಅಣ್ಣತಮ್ಮಂದಿರು ಮನೆಗೆ ಹಿಂತಿರುಗಿದಾಗ ರಾಜನ ವ್ಯಾಧಿ ಸ್ವಲ್ಪವೂ ಗುಣವಾಗಿರಲಿಲ್ಲ. ಮೋಸವನ್ನರಿಯದ ಮೂರನೇಯವನು ತಾನು ತಂದಿರುವುದು ಜೀವಜಲವೆಂದು ಉಪ್ಪುನೀರನ್ನು ಮಾವನಿಗೆ ಕುಡಿಸಿದ.

ಆ ನೀರನ್ನು ಗಂಟಲಲ್ಲಿ ಸುರಿದುಕೊಳ್ಳುವ ಹೊತ್ತಿಗೆ ರಾಜನಿಗೆ ಮೇಲುಸಿರು ಕೆಳಉಸಿರಿಗಿಟ್ಟುಕೊಂಡಿತು. ಮೂರನೇಯವನನ್ನು ನೋಡಿ ಗುಡುಗುಡಿಸಿದ. ಆಗ ದೊಡ್ಡವರಿಬ್ಬರು ತಾವು ಮೋಸಗೊಳಿಸಿ ತಂದಿದ್ದ ಜೀವಜಲವನ್ನು ರಾಜನಿಗೆ ಕೊಟ್ಟರು. ಕೂಡಲೇ ರಾಜನ ಕಾಯಿಲೆ ವಾಸಿ ಆಯಿತು. ಆಗ ಮೂರನೇಯವನು ಮೋಸಗಾರನೆಂದು ರಾಜನು ಅವನನ್ನು ದೇಶದಿಂದ ಹೊರಗಟ್ಟಿದ.

ರಾಜಭ್ರಷ್ಟನಾದ ಮೂರನೇಯವನು ಅರಣ್ಯಗಳಲ್ಲೇ ವಾಸಮಾಡತೊಡಗಿದ. ಅವನಿಂದ ರಕ್ಷಿಸಲ್ಪಟ್ಟ ರಾಜಕುಮಾರಿ ಒಂದು ವರ್ಷದನಂತರ ಆತನು ಬರಲಿಲ್ಲವೆಂದು ಸೇವಕರನ್ನು ಕರೆದು: "ಕಲ್ಲುಕದದಿಂದ ಒಂದು ಮೈಲು ದೂರ ಚಿನ್ನದ ರಸ್ತೆಯನ್ನು ನಿರ್ಮಿಸಿರಿ. ಯಾರಾದರೂ ಸರಿ ಈ ದಾರಿಮಧ್ಯದಲ್ಲಿ ಕುದುರೆಯಮೇಲೆ ಬಂದರೆ ಬಾಗಿಲನ್ನು ತೆಗೆ

ಯಿರಿ. ರಸ್ತೆಯ ಆ ಕಡೆ, ಈ ಕಡೆ ಬರುವ ವರಿಗೆಮಾತ್ರ ಬಾಗಿಲು ತೆರೆಯಬೇಡಿ' ಎಂದು ಆಜ್ಞಾಪಿಸಿದಳು.

ಮೂರನೇಯವನು ದೇಶಾಂತರ ಹೊರಟ ನೆಂದು ನಿರ್ಧರಿಸಿಕೊಂಡು ಹಿರಿಯವನು ರಾಜ ಕುಮಾರಿಯನ್ನು ವಿವಾಹವಾಗುವ ದುರುದ್ದೇಶ ದಿಂದ ಒಂದು ಅಶ್ವವನ್ನೇರಿ ಯಾರಿಗೂ ತಿಳಿಯದಂತೆ ಪ್ರಯಾಣಮಾಡಿದ. ರಸ್ತೆ ಹತ್ತಿ ರಕ್ಕೆ ಬರುವವೇಳೆಗೆ:

"ಜಗಜಗಿಸುತ್ತಿರುವ ಈ ಚಿನ್ನದ ರಸ್ತೆ ಯಲ್ಲಿ ನನ್ನ ಕುದುರೆಯನ್ನು ನಡೆಸಿದರೆ ಅದು ಹಾಳಾಗುವುದು. ಆದುದರಿಂದ ಒಂದು ಪಕ್ಕಕ್ಕೆ ಸರಿದು ಹೋಗುವೆನು" ಎಂದು ರಸ್ತೆಯ ಬಲಮಗ್ಗುಲಿನಲ್ಲಿ ಹೊರಟು ಕಲ್ಲು ಕದದ ಬಳಿ ಸೇರಿದ. ಕದ ತಟ್ಟಿದ. ದ್ವಾರದ ಪಕ್ಕದಲ್ಲಿದ್ದ ಕಿಂಡಿಗಳಿಂದ ನೋಡುತ್ತಿದ್ದ ರಾಣಿಯ ಸೇವಕರು ಅವನನ್ನು ಗದರಿಸಿ ಹೊರಗಟ್ಟಿದರು.

ಅನಂತರ ಎರಡನೇಯವನು ಹೊರಟ. ಅವನೂ ಬಂಗಾರದ ರಸ್ತೆಯನ್ನು ನೋಡಿ, ಅಣ್ಣನಂತೆ ಕುದುರೆಯನ್ನು ಎಡಪಕ್ಕದಲ್ಲಿ ಓಡಿಸಿದ. ಅವನಿಗೂ ರಾಣಿಯ ಸೇವಕರು ತಕ್ಕ ಶಾಸ್ತಿಮಾಡಿದರು.

ಮತ್ತೆ ಕೆಲವು ದಿನಗಳಾದಮೇಲೆ ಮೂರ ನೇಯವನು ಹೊರಟ. ವಾಗ್ದಾನಮಾಡಿದಂತೆ ಒಂದುವರ್ಷಕ್ಕೆ ಸರಿಯಾಗಿ ರಾಣಿಯನ್ನು ನೋಡಲಾಗಲಿಲ್ಲವೆಂಬ ಕಾತುರತೆಮಾತ್ರ ಅವನ ಮನಸ್ಸಿನಲ್ಲಿ ನೆಲಸಿತ್ತು. ಆ ಅವಸರ ದಲ್ಲಿ ಬೇರೆ ಯಾವುದೊಂದೂ ಯೋಚನೆ ಯಿಲ್ಲದೆ ದಾರಿಯಸಂಗತಿ ಗಮನಿಸದೆ ಚಿನ್ನದ ರಸ್ತೆಯಮಧ್ಯದಲ್ಲೇ ಕುದುರೆಯನ್ನು ಓಡಿಸಿ ಕಲ್ಲಿನದ್ವಾರವನ್ನು ತಟ್ಟಿದ. ಸೇವಕರು ತಕ್ಷಣವೇ ಬಾಗಿಲನ್ನು ತೆಗೆದರು.

ರಾಜಕುಮಾರಿಗೂ ಮೂರನೇಯವನಿಗೂ ಅತ್ಯಂತ ವಿಜೃಂಭಣೆಯಿಂದ ಮದುವೆ ನಡೆ ಯಿತು. ಅನಂತರ ಈ ದಂಪತಿಗಳು ಕುಂತಳ ರಾಜ್ಯವನ್ನುಸೇರಿ ನಡೆದುದನ್ನೆಲ್ಲಾ ರಾಜನಿಗೆ ತಿಳಿಸಿದರು.

ಅಣ್ಣಂದಿರಿಬ್ಬರ ಮೋಸವನ್ನರಿತ ರಾಜನು ಅವರಿಬ್ಬರನ್ನೂ ದೇಶದಿಂದ ಹೊರಗೆ ಅಟ್ಟಿ, ಮೂರನೇಯವನಿಗೆ ರಾಜ್ಯವನ್ನು ಕೊಟ್ಟು ಪಟ್ಟಾಭಿಷೇಕ ಮಾಡಿದ.



# ಹೀಗೆ ಮಾಡಲು ನಿನ್ನಿಂದಾಗುವುದೇ!

*

(1) ಸೀಸದಕಡ್ಡಿಯನ್ನು ಮೇಲಕ್ಕೆತ್ತದೆ 100 ಬರೆದು, ಅದರ ಸುತ್ತಲೂ ಸೊನ್ನೆ ಸುತ್ತ ಬಲ್ಲೆಯಾ?—ಇದು ಮಾಡುವುದಾದರೂ ಹೇಗೆ?

ಒಂದು ಕಾಗದ ತೆಗೆದುಕೊ. ಆಕಾಗದದ ಮೇಲುಭಾಗವನ್ನು ಮಡಚು. ಒಂದು ಅಂಕೆಯಿಂದ ಪ್ರಾರಂಭಿಸಿ ಪಕ್ಕದ ಚಿತ್ರದಲ್ಲಿರುವಂತೆ ಗೆರೆಹಾಕು. ಆ ಮೇಲೆ ಮಡಚಿರುವ ಮೇಲಿನಭಾಗವನ್ನು ತೆಗೆದುಬಿಡು. ಈಗ ನಿನಗೆ 100 ಅಂಕಿ, ಅದರ ಕೆಳಭಾಗದಲ್ಲಿ ಅರ್ಧಚಂದ್ರಾಕಾರ ಸ್ಪಷ್ಟವಾಗಿ ಕಾಣಿಸುವುದು.




(2) ಹತ್ತು ರೂಪಾಯಿ ನೋಟೊಂದನ್ನು ಎರಡು ಗ್ಲಾಸುಗಳ ಮೇಲಿರಿಸಿ, ಆ ನೋಟಿನ ಮೇಲೆ ನಾಣ್ಯಗಳನ್ನು ಇಡಬಲ್ಲೆಯಾ?



ಎರಡು ಗ್ಲಾಸುಗಳನ್ನು ತೆಗೆದುಕೋ. ಅವನ್ನು ಮೂರು ಅಂಗುಲದ ದೂರದಲ್ಲಿಡು. ಒಂದು ಹೊಸಾ ಹೊಸ ಹತ್ತು ರೂಪಾಯಿ ನೋಟು ತೆಗೆದುಕೊಂಡು ಅದನ್ನು ಉದ್ದವಾಗಿ ಅರ್ಧಕ್ಕೆ ಸರಿಯಾಗಿ ಮಡಚು. ಆ ನೋಟಿನ ಎರಡು ಭಾಗಗಳನ್ನು ಉದ್ದಕ್ಕೆ ಮತ್ತೆ ಸರಿಯಾಗಿ ಅರ್ಧಕ್ಕೆ ಮಡಚು. ಹೀಗೆ ಮಡಚಿದ್ದನ್ನು ಗ್ಲಾಸುಗಳ ಮೇಲಿರಿಸಿದರೆ 'M' ರೀತಿಯಿರುತ್ತದೆ. ಈಗ ನಿನ್ನಲ್ಲಿರುವ ನಾಣ್ಯವನ್ನು ಮಡಕೆ ಮೇಲಿಡು. ಅದರ ಮೇಲೆ ಎಷ್ಟು ನಾಣ್ಯಗಳನ್ನು ಜೋಡಿಸಿಟ್ಟರೂ ಹೊಂದಿಕೆಯಾಗಿ ನಿಲ್ಲುತ್ತವೆ.

---

## ಚು ಟು ಕ

ಗುಲಾಬಿ ಎಂಬವಳೆನ್ನಯತಂಗಿ,
ಗುಲಾಬಿ ಬಣ್ಣವ ಮೆಚ್ಚುವರಂಗಿ.
ಗುಲಾಬಿ ಸೀರೆಯ ಸುಟ್ಕೊಂಡು,
ಗುಲಾಬಿ ಹೂವನು ಕೊಯ್ವಾಗ,
ಗುಲಾಬಿ ಮುಳ್ಳು ಚುಚ್ಚಿ, ಗುಲಾಬಿ ಸೀರೆ ಹರಿದು
ಗುಲಾಬಿ ಚೆಲ್ಲಿ ಅಳುತ್ತ ಬಂದಳು ಗುಲಾಬಿತಂಗಿ!

—ಕೆ. ರಾಮಕೃಷ್ಣ ನಾಯಕ.

ಬೇಡನೊಬ್ಬ ಬಂದ—ಕ್ರೌಂಚ ಜತೆಯನೊಂದ,
ಹೊಡೆದಾ ಬಾಣದಿಂದ—ಬಿತ್ತುಕೊಂಬೆಯಿಂದ
ಹೆಣ್ಣು ಗಾಯದಿಂದ, ಈ ಹೃದ್ರಾವ್ಯದಿಂದ—
ಕವಿಯಕರುಣ ದೊರತೆಯೊಡೆದು
ಕಲ್ಪನೆಯಕುಡಿಗಳುಗಿದು—
ಅಮರಕಾವ್ಯ ರಾಮಾಯಣ ಬಲುಚಂದ!'

—ಕಮರ್, ಮಂಗಳೂರು

# ವಿಚಿತ್ರ ಹಣ

ಹಣದ ಅಗತ್ಯವಿಲ್ಲದವರು ಪ್ರಪಂಚದಲ್ಲಿರಲಾರರು. ನಮಗೆ ಬಹುದೂರದಲ್ಲಿರುವ ಜಗತ್ತಿನ ಹಲವಾರು ದೇಶಗಳಲ್ಲಿ ಹಣ ಕೆಲವು ವಿಚಿತ್ರರೂಪವನ್ನು ತಾಳುತ್ತದೆ. ಕೆಲವೆಡೆಗಳಲ್ಲಿ ನಾಣ್ಯಗಳು ಸಿಕ್ಕಿದರೆ ಜನತೆ ಅವುಗಳಿಂದ ಸರ ಪೋಣಿಸಿ ಕೊಳ್ಳುವುದು. ಅಥವಾ ಅವುಗಳನ್ನು ನೆಲದಲ್ಲಿ ಹೂಳಿಬಚ್ಚಿಡುವುದೇ ಉತ್ತಮವೆಂದು ಭಾವಿಸುವರು. ಉದಾಹರಣೆಗಾಗಿ:—

1. ನ್ಯೂಗಿನಿಯಲ್ಲಿ ಹಂದಿಗಳನ್ನು ಭಾರಿ ಮೊತ್ತವೆಂತಲೂ, ಕಪ್ಪೆಚಿಪ್ಪುಗಳ ಹಾರವನ್ನು ಚಿಲ್ಲರೆಹಣದಂತೆ ಬಳಸುವರು.
2. ಸೋಲಮರ್ನ್ ದ್ವೀಪಗಳಲ್ಲಿ ಮೀನಿನದಂತಗಳೂ ಕಪ್ಪೆಚಿಪ್ಪುಗಳ ಸರಚಲಾವಣೆಯಲ್ಲಿದೆ.
3. ನ್ಯೂಗಿನಿಯಲ್ಲಿ ಕೆಲಸಮಾಡುವ ಕೂಲಿಗಳಿಗೆ ಸಂಬಳಕ್ಕೆ ಬದಲಾಗಿ ಹೊಗೆಸೊಪ್ಪು ಕೊಟ್ಟರೆ ಅವರು ತುಂಬಾ ಸಂತೋಷಪಡುವರು.
4. ಮೊರಾಕೋವಿನ ಕೆಲವು ಪ್ರಾಂತ್ಯಗಳಲ್ಲಿ ಸೈಂಧವಲವಣವನ್ನು ಹಣದಂತೆ ಉಪಯೋಗಿಸುವರು.
5. ಮಧ್ಯೆ ರಂಧ್ರವಿರುವ ನಾಣ್ಯಗಳನ್ನು ಕಂಡುಹಿಡಿದವರು ಚೀಣೀಯರು. ಅವುಗಳನ್ನೂ ಸರದಂತೆ ಪೋಣಿಸಿದರೆ ಎಲ್ಲಿಗೆಬೇಕಾದರೂ ಸಲೀಸಾಗಿ ತೆಗೆದುಕೊಂಡು ಹೋಗಬಹುದೆಂದು ಅವರ ಅಭಿಪ್ರಾಯ.
6. ಅಲಾಸ್ಕಾ ಸಮೀಪದಲ್ಲಿರುವ ಕೆಲವು ದ್ವೀಪಗಳಲ್ಲಿ ಮೀನು ಹಿಡಿಯುವ ಗಾಳಗಳನ್ನು ನಾಣ್ಯಗಳಂತೆ ಚಲಾವಣೆ ಮಾಡುತ್ತಿದ್ದಾರೆ.
7. ಮಧ್ಯಏಷ್ಯಾದ ಕೆಲ ಪ್ರಾಂತಗಳಲ್ಲೂ, ತುರ್ಕಿಸ್ತಾನದ ಕೆಲವು ಸ್ಥಳಗಳಲ್ಲೂ ಟೀಸೊಪ್ಪನ್ನು ಬಿಲ್ಲೆಗಳಾಗಿ ಮಾಡಿಸಿ ಅವನ್ನು ಉಪಯೋಗಿಸುತ್ತಿರುವರು.
8. ಮಂಗೋಲಿಯಾದಲ್ಲಿ ಕೆಲವು ನಾಣ್ಯಗಳು ಹಡಗಿನ ಆಕಾರವಾಗಿರುತ್ತವೆ.

# ಮೂರು ಹೊಡೆತಗಳು

ಪ್ರಾಣಿ ಪ್ರಪಂಚದಲ್ಲಿ ಮೂರರಪೆಟ್ಟು ಸಹಿಸಲಾಗದಂತಿರುತ್ತದೆ: ಆ ಮೂರು ಪ್ರಾಣಿಗಳನ್ನು ಬಲ್ಲಿರಾ?

1. ತಿಮಿಂಗಿಲದ ಬಾಲದಹೊಡೆತ
2. ಜಿರಾಪೆ ಕಾಲಿನ ಒದೆ
3. ಸಿಂಹದ ಪಂಜಾಪೆಟ್ಟು

ಇವುಗಳಲ್ಲಿ ಯಾವುದು ಬಿದ್ದರೂ ಬದುಕುವುದು ದುರ್ಲಭವೆಂದು ಹೇಳಬಹುದು.

# ಹಿಂಬದಿಯ ಚಿತ್ರ

ಬಿಳೀ ಬೆಕ್ಕಿನ ಬಳಿಯಿಂದ ಹಿಂದಿರುಗಿದ ಸದಯಸೇನನು, ಆ ನಾಯಿಬೊಂಬೆಯನ್ನು ಎಲ್ಲರಿಗೂ ತೋರಿಸಿದನು. ಅದು ಪ್ರಪಂಚದೊಳಗೇ ಸಣ್ಣ ನಾಯಿಬೊಂಬೆ. ಒಂದು ಸಣ್ಣ ಉಂಗುರದ ಒಳಗೆ ನುಸುಳುವಂಥಾದ್ದು. ಅದು ವಿಚಿತ್ರವಾಗಿ ಬೊಗಳುತ್ತಿತ್ತು. ಲಾಗ ಹಾಕುತ್ತಿತ್ತು. ರಾಜಾಧಿರಾಜರೆಲ್ಲಾ ಅದರ ವಿಚಿತ್ರ ಚೇಷ್ಟೆಗಳನ್ನು ನೋಡಿ ಹೊಟ್ಟೆ ಹುಣ್ಣಾಗುವಂತೆ ನಕ್ಕರು. ರಾಜ್ಯವನ್ನು ಈ ಹುಡುಗನಿಗೇ ಕೊಡಬೇಕೆಂದು ಎಲ್ಲರೂ ನಿಶ್ಚಯಿಸಿದರು.

ರಾಜನಿಗೆ ಈ ನಾಯಿ ಬೊಂಬೆಯನ್ನು ನೋಡಿದ ಆನಂದದಿಂದ ಮೊದಲಿನ ಯೌವನವು ಬಂದುಬಿಟ್ಟಿತು. ಇನ್ನು ತಾನೇ ರಾಜ್ಯವಾಳಬೇಕೆಂಬ ಆಶೆಯುಂಟಾಯಿತು. ಆದ್ದರಿಂದ ಮಕ್ಕಳೊಡನೆ ಇನ್ನೊಂದು ಪರೀಕ್ಷೆ ಇಟ್ಟನು. 'ದೇವತೆಗಳ ವಸ್ತ್ರದಂತೆ ನಯವಾದ, ನಾನ್ನೂರು ಗಜ ಉದ್ದವಾದ, ಸೂಜಿಯ ತೂತಿನೊಳಗೆ ಹೊಗಿಸುವಂತಹ ಬಟ್ಟೆಯನ್ನು ಯಾರು ತರುವಿರೋ ಅವರಿಗೇ ರಾಜ್ಯಕೊಡುವೆ' ಎಂದನು.

ಮೊದಲಿನಂತೆಯೇ ಮೂವರು ರಾಜಕುಮಾರರೂ ಹೊರಟರು. ಸದಯಸೇನನು ಆ ಬಿಳೀ ಬೆಕ್ಕಿನ ಭವನಕ್ಕೆ ಹೋದನು. ಬಿಳೀಬೆಕ್ಕು ಅವನನ್ನು ಪ್ರೇಮದಿಂದ ಆದರಿಸಿ, ಅವನು ಕೋರಿಕೊಂಡಂತಹ ಬಟ್ಟೆಯ ಕಾಣಿಕೆಯನ್ನು ಕೊಟ್ಟು ಕಳುಹಿಸಿತು.

ಇದನ್ನು ನೋಡುತ್ತಲೇ ರಾಜನಿಗೆ ಆನಂದವು ಮತ್ತಷ್ಟು ಹೆಚ್ಚಾಯಿತು. ರಾಜ್ಯವನ್ನು ಮಕ್ಕಳಿಗೆ ಕೊಡಲು ಇಷ್ಟಬರಲಿಲ್ಲ. ಅದಕ್ಕಾಗಿ ಇನ್ನೊಂದು ಪರೀಕ್ಷೆ ಇಟ್ಟನು. ಪ್ರಪಂಚದೊಳಗೆಲ್ಲಾ ಪರಮ ಸುಂದರಿಯಾದ ಕನ್ಯೆಯನ್ನು ಯಾರು ತಂದರೆ ಅವರಿಗೇ ರಾಜ್ಯವೆಂದು ಪ್ರಕಟ ಮಾಡಿದನು.

ಮೂರನೇಸಾರಿ ಕೂಡಾ ಸದಯಸೇನನು ಬೆಕ್ಕಿನ ಬಳಿಗೇ ಬಂದು, ತಂದೆಯ ಕೋರಿಕೆಯನ್ನು ತಿಳಿಸಿದನು. ಆಗ ಆ ಬಿಳೀಬೆಕ್ಕು—"ಇದಕ್ಕೇನು? ನೀನೊಂದು ಕೆಲಸ ಮಾಡು. ಕತ್ತಿಯಿಂದ ನನ್ನ ತಲೆಯನ್ನುಕಡಿ, ನನ್ನ ಉಗುರುಗಳನ್ನು ಸುಲಿದು ಬೆಂಕಿಗೆ ಹಾಕು. ನಿನ್ನ ಕೆಲಸ ಪೂರ್ಣವಾಗುತ್ತದೆ" ಎಂದಿತು.

ಸದಯಸೇನನು ತತ್ತರಗುಟ್ಟಿದನು. ಬೆಕ್ಕು ಬಹಳವಾಗಿ ಬಲವಂತ ಮಾಡಿತು. ಕಟ್ಟಕಡೆಗೆ ಅವನು "ಆಯ್ಯೋ! ನಾನೆಂತಹ ದುರ್ಮಾರ್ಗ!" ಎಂದು ಕೂಗುತ್ತಾ, ಮುಖವನ್ನು ಆಚೆಗೆ ತಿರುಗಿಸಿ ಕಣ್ಣು ಮುಚ್ಚಿಕೊಂಡು, ತನ್ನ ಪ್ರೀತಿಪಾತ್ರವಾದ ಆ ಬೆಕ್ಕಿನ ತಲೆಯನ್ನು ಕಡಿದನು. ಬಳಿಕ ಅದರ ಉಗುರುಗಳನ್ನು ಬೆಂಕಿಗೆ ಹಾಕಿದನು.

ಅಷ್ಟರಲ್ಲಿ ಅವನ ಇದಿರಿನಲ್ಲಿ ಅಪೂರ್ವ ಸುಂದರಿಯಾದ ಕನ್ಯೆಯೊಬ್ಬಳು ಗೋಚರಿಸಿದಳು!!

## ಒಂದೇ ಗೆರೆಯ ಚಿತ್ರ



ಪಾರೇಪಲ್ಲಿ ವೆಂಕಟೇಶ್ವರ್ಲು - ಅಮರಾವತಿ

## ರು ಚಿ ರು ಚಿ ಹ ಣ್ಣು

ತೋಟದ ಒಳಗೆ ಮಾವಿನ ಹಣ್ಣು
ಪೇಟೆಯ ಒಳಗೆ ಕಿತ್ತಳೆ ಹಣ್ಣು
ಅಂಗಡಿಯೊಳಗೆ ಬಾಳೆಯ ಹಣ್ಣು
ಮಂಗಗಳಿಗೆ ಆ ನೇರಳೆ ಹಣ್ಣು
ಪಾನಕಮಾಡಲು ನಿಂಬೆಯ ಹಣ್ಣು
ಬಾವಲಿಗಳಿಗೆ ಪೇರಳೆ ಹಣ್ಣು
ಸಂತೆಯ ಒಳಗೆ ಹಲಸಿನ ಹಣ್ಣು
ಹುಣ್ಣು ಹಣ್ಣು ರುಚಿರುಚಿ ಹಣ್ಣು.

ಭು. ಶೆ. ಕುರುಕಾಲು, ಕುಂಜಾರುಗಿರಿ.

### "ಉತ್ತರಹೇಳು" ಪ್ರಶ್ನೆಗಳಿಗೆ ಉತ್ತರ

| | |
|---|---|
| 1. ಮಿಸಿಸಿಪಿ | 4. ಗೋರ್ಕಿ |
| 2. ಬಿರ್ಕಾಸಿಮ್ | 5. ಬೆಲ್ |
| 3. ಜಿರಾಫೆ | 6. ಕಾಳಿದಾಸ |

## ಫೋಟೋ ಶೀರ್ಷಿಕೆಯ ಸ್ಪರ್ಧೆ

### ಮೇ ಫೋಟೋಗಳ ಫಲಿತಾಂಶ:

ಮೇ ತಿಂಗಳ ಚಂದಮಾಮದಲ್ಲಿ ಪ್ರಕಟಿಸುವ ಫೋಟೋಗಳಿಗೆ ನಮಗೆಬಂದ ಶೀರ್ಷಿಕೆಗಳಲ್ಲಿ ಉತ್ತಮವಾಗಿರುವ ಈ ಕೆಳಗಿನ ಶೀರ್ಷಿಕೆಗಳಿಗೆ ಬಹುಮಾನವೆಂದು ನಿರ್ಣಯಿಸಲಾಗಿದೆ.

ಶೀ ರ್ಷಿ ಕೆ :

ಮೊದಲನೇ ಫೋಟೋ :

ಆಲಿಸಲು

ಎರಡನೇ ಫೋಟೋ :

ಆಲಾಪಿಸಲು

ಕ ಳಿ ಸಿ ದ ವ ರು :

ಜಿ. ಪದ್ಮಾ, ಶ್ರೀ ರಾಮಕೃಷ್ಣ ನೇಷನಲ್ ಗರ್ಲ್ಸ ಸ್ಕೂಲ್, ಜಿ. ಟಿ. ಮದ್ರಾಸು.

ಬಹುಮಾನಪಡೆದ ಈ ಶೀರ್ಷಿಕೆಗಳನ್ನು, ಕಳುಹಿಸಿದವರ ಹೆಸರಿನೊಂದಿಗೆ, ಮೇ ಚಂದಮಾಮದಲ್ಲಿ ಪ್ರಕಟಿಸುತ್ತೇವೆ. ಬಹುಮಾನದ ಮೊಬಲಗು ರೂ. 10/-ನ್ನು ಮೇ ಸಂಚಿಕೆ ಹೊರಟಕೂಡಲೇ ಕಳುಹಿಸಲ್ಪಡುತ್ತದೆ.



### ಜೂನ್ ತಿಂಗಳಲ್ಲಿ

ಪ್ರಕಟಿಸುವ ಫೋಟೋಗಳ ಮಾದರಿಯನ್ನು ವಿವರಗಳೊಂದಿಗೆ ಪಕ್ಕದ ಪುಟದಲ್ಲಿ ನೋಡಿ.

### ಮುಖ್ಯ ಸೂಚನೆ :

ನೀವು ಕಳುಹಿಸುವ ಶೀರ್ಷಿಕೆಗಳನ್ನು ಆಚೆಯ ಪುಟದ ಕೂಪನಿನಲ್ಲೇ ಬರೆದು ಕಳಿಸಬೇಕು. ಅದನ್ನು ಕತ್ತರಿಸಿ ಕವರಿನಲ್ಲಿ ಹಾಕಿ ಮುಚ್ಚದೆ, 0-0-9 ಸ್ಟಾಂಪು ಹಚ್ಚಿ ಬುಕ್‌ಪೋಸ್ಟ್ ಮೂಲಕ ಕಳಿಸಿ. ಪತ್ರವೇನೂ ಇಡಬೇಡಿ.

## 1953 ಜೂನ್ ಸಂಚಿಕೆಯಲ್ಲಿ ಪ್ರಕಟಿಸುವ ಫೋಟೋಗಳ ಮಾದರಿ :





* ಮೇಲಿನ ಎರಡು ಫೋಟೋಗಳಿಗೆ ಸರಿಹೋಗುವ ಶೀರ್ಷಿಕೆಗಳು ಬೇಕು. ಮುದ್ದಾದ ಒಂದು ಮಾತಾಗಲೀ, ಎರಡು ಮೂರು ಶಬ್ದಗಳ ಒಂದು ವಾಕ್ಯವಾಗಲೀ ಇರಬಹುದು. ಎರಡು ಫೋಟೋಗಳಿಗೂ ಸಂಬಂಧಿಸಿದ ಮಾತಾಗಿರಬೇಕು.
* ಏಪ್ರಿಲ್ 10ನೇ ತಾರೀಕಿನೊಳಗೆ ಶೀರ್ಷಿಕೆಗಳು ನಮಗೆ ಸೇರಬೇಕು. ಆಮೇಲೆ ಬಂದವುಗಳನ್ನು ಖಂಡಿತ ಪರಿಶೀಲಿಸಲಾಗದು.
* ನಮಗೆ ಬಂದ ವಾಕ್ಯಗಳಲ್ಲಿ ಅತ್ಯುತ್ತಮವಾದ ಒಂದು ಜತೆ (ಅಂದರೆ ಎರಡು ಶೀರ್ಷಿಕೆಗಳಿಗೂ ಸೇರಿ) ರೂ. 10/- ಬಹುಮಾನವಾಗಿ ಕೊಡಲ್ಪಡುತ್ತದೆ.
* ಕೆಳಗಿನ ಕೂಪನ್‌ನಲ್ಲಿ ಎರಡು ಶೀರ್ಷಿಕೆಗಳನ್ನು ಬರೆದು ತುಂಬಿಸಿ, ಈ ವಿಳಾಸಕ್ಕೆ ಕಳಿಸಬೇಕು: ಚಂದಮಾಮ ಫೋಟೋ ಶೀರ್ಷಿಕೆಯ ಸ್ಪರ್ಧೆ, ಮದ್ರಾಸು-26.
* ಚಂದಮಾಮ ಕೂಪನ್ ಹೊರತು ಬೇರೆ ವಿಧವಾಗಿ ಕಳಿಸುವ ಶೀರ್ಷಿಕೆಗಳು ಖಂಡಿತ ಸ್ವೀಕರಿಸಲ್ಪಡುವುದಿಲ್ಲ.

——→ ಚಂದಮಾಮ ಫೋಟೋ ಶೀರ್ಷಿಕೆಯ ಸ್ಪರ್ಧೆಯ ಕೂಪನ್ ←——

ಮೊದಲನೇ ಫೋಟೋ ಎರಡನೇ ಫೋಟೋ

ಶೀರ್ಷಿಕೆ.................................... ಶೀರ್ಷಿಕೆ....................................

ಕಳಿಸಿದವರ ಹೆಸರು..................................................................

ಪೂರ್ಣ ವಿಳಾಸ........................................................................

June '53

ಬರುತ್ತದೆ!

ವಿಜಯ ರವರ

# ಚಂದ್ರಹಾರಂ

ನಿರ್ದೇಶಕರು
ಕೆ. ಕಾಮೇಶ್ವರರಾವ್ B.A.



ನಿರ್ಮಾಪಕರು...ನಾಗಿರೆಡ್ಡಿ...ಚಕ್ರಪಾಣಿ

Printed by B. NAGI REDDI at the B. N. K. Press Ltd., Madras 26 and Published by him from Chandamama Publications, Madras 26. Controlling Editor: SRI CHAKRAPANI.

Photo by Pranlal K. Patel



ಬಹುಮಾನ ಪಡೆದ ಶೀರ್ಷಿಕೆ

"ಹುಲ್ಲೂ ಚಿಗುರೂ ಸಾಕಂತೆ!"

ಕಳಿಸಿದವರು: ಎಚ್. ಲಕ್ಷ್ಮೀನಾರಾಯಣ, ಬಳ್ಳಾರಿ

